# ಕನ್ನಡನುಡಿ

ಸಂಪುಟ ೧೫ ನವೆಂಬರ್ ಸಂಚಿಕೆ ೧೧

ವಾರ್ಷಿಕ ಚಂದಾ : ಅಂಚೆ ವೆಚ್ಚ ಸೇರಿ ರೂ. ೬



ಸಂಪಾದಕರು :
ಎಂ. ಆರ್. ಶ್ರೀನಿವಾಸಮೂರ್ತಿಗಳು

ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು
೧೯೫೨

# ವಿಷಯಸೂಚಿಕೆ



ಮೈಸೂರು ವಿದ್ಯಾಖಾತೆಯವರಿಂದ ಟಿ. ಬಿ. ಸಿ. 15/50-51 (ತಾ॥ 24-11-50) ನಿರೂಪದ ಪ್ರಕಾರ 'ಕನ್ನಡ ನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈಯಿನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ. ರೂರಲ್ ಡೆವಲಪ್‌ಮೆಂಟ್ ಕಮಿಷನರ್ ಅವರ ನಂ.ಆರ್.ಡಿ.ಆರ್. 7, ಸಿ.2915/50-51 ನೆಯ ಪ್ರಕಾರ "ಕನ್ನಡ ನುಡಿ" ಸಂಸ್ಥಾನದ ಎಲ್ಲಾ ಗ್ರಾಮಪಂಚಾಯಿತಿಗಳಿಗೂ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.

## ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೨

ಪರಿಷತ್ತಿನ ಮಾನ್ಯ ಸದಸ್ಯರಲ್ಲಿ ಮತ್ತು ಅಂಗಸಂಸ್ಥೆಗಳಲ್ಲಿ ವಿಜ್ಞಾಪನೆ:—

ಪರಿಷತ್ತಿನ ವಾರ್ಷಿಕ ಚಂದಾ ಡಿಸೆಂಬರ್ ೧೯೫೨ಕ್ಕೆ ಮುಗಿಯುತ್ತದೆಯಷ್ಟೆ. ೧೯೫೩ನೆಯ ವರ್ಷದ ಚಂದಾ ಹಣವನ್ನು ೧೯೫೩ನೆಯ ಫೆಬ್ರವರಿ ತಿಂಗಳೊಳಗಾಗಿ ಪರಿಷತ್ತಿಗೆ ಕಳಿಸಿ ಕೊಟ್ಟು ಉಪಕರಿಸಬೇಕಾಗಿ ಕೋರಿದೆ.

ಸಿ. ಕೆ. ನಾಗರಾಜರಾವ್
ಗೌ॥ ಕಾರ್ಯದರ್ಶಿ

## ಕನ್ನಡ ಸಾಹಿತ್ಯ ಪರಿಷತ್ತಿನಿಂದ

### ಸನ್ಮಾನವನ್ನು ಸ್ವೀಕರಿಸಿದ ಇಬ್ಬರು ಮಹನೀಯರು



ಶ್ರೀ ವೀರಭದ್ರಪ್ಪ ಹಾಲಬಾವಿಯವರು
ಬಿ.ಎ., ಎಲ್‌ಎಲ್.ಬಿ.,
ಧಾರವಾಡ



ಆಸ್ಥಾನ ಮಹಾವಿದ್ವಾನ್, ವೇ. ಬ್ರಂ.
ನಂಜನಗೂಡು ಶ್ರೀಕಂಠಶಾಸ್ತ್ರಿಗಳು
ಮೈಸೂರು




ಸಂಪುಟ ೧೫ | ನವೆಂಬರ್ ೧೯೫೨ | ಸಂಚಿಕೆ ೧೧




## ದಾಳಿಂಬೆ

ಇದು ಮಾಸಲೇ ನನಗೆ, ಈ ಬೆಳ್ಳಿಬಟ್ಟಲೊಳು
ರತ್ನ ಕಾಂತಿಯ ಚೆಲ್ಲಿ ಕಳಕಳಿಪ ದಾಳಿಂಬೆ ?
ನೂತ್ನ ಋದ್ಧಿಯ ಪಡೆದ ಮೋದದೊಳಗೀ ಜಿಹ್ವೆ
ಇದುವರೆಗು ಕಾರ್ಪಣ್ಯದೊಳಗಿದ್ದೆನೆನುತಿಹುದು
ಬಿತ್ತಬಿತ್ತದ ರಸವ ಸವಿದು ಸವಿದಾಕ್ಷಣದಿ
ಆಯುಷ್ಯ ಸಾರವನು ಬಟ್ಟಿಯಿಳಿಸುವ ತೆರದಿ.
ದೇಯವಿದನಾ ರೂಕ್ಷ ವೃಕ್ಷವೀ ಪೃಥ್ವಿಯಿಂ
ದೆತ್ತಿ ಈ ಮುದವೆರೆವೊಲಾವರ್ತಿ ಚೋದಿಸಿತು ?
ಋತುಋತುಗಳಾದರವ, ಗಾಳಿಯಪ್ಪುಗೆ ಸೊಬಗ,
ಬೆಂಗದಿರರಕ್ತಿಯನು, ತಂಗದಿರಸಕ್ತಿಯನು
ತಂಗಿಸಿತೊ ಮಳೆಮಂಜಿನೊಲವ ಮಧುರಾಮ್ಲದೊಳು
ಇತರೇಂದ್ರಿಯ ದ್ಯುತಿಯ ರಸನೆಗನುವದಿಸುವೊಲು ?
ರಸವಿದೇನಿದ ಸವಿವರಾರೇನಿದಚ್ಚರಿಯ ಭೋಗ
ರಸನೆಹಸೆಯೊಳು ಪ್ರಕೃತಿ ಪುರುಷೋತ್ತಮರ ದಿವ್ಯಯೋಗ !

—ಶ್ರೀ ಪು. ತಿ. ನ.

## ಕವಿಸೂಕ್ತಿ

ಕಂಡವರಿಗೆ ಪುಣ್ಯ ನೃಪತಿ ನಿನ್ನಯ ಪೆಸ
ರ್ಗೊಂಡವರಿಗೆ ಪಾಪನಾಶಾ ।
ಕಂಡುದ ನುಡಿದೆನು ಸ್ತುತಿಯೆನ್ನದಿರು ಲೇಸ
ಕಂಡು ಬಾಯಾಲ್ವನು ಕವಿಯೇ ॥

ಸತ್ಪಾತ್ರದಾನಿಗೆ ತತ್ವ ವಿಜ್ಞಾನಿಗೆ
ಚಿತ್ಪರಿಣಾಮಾನುಭವಿಗೆ ।
ಸತ್ಪುರುಷರು ಸೋಲ್ವರರಸ ತುಂಬಿಗಳು ಮ-
ಹೋತ್ಪಲರಸಕೆ ಸೋಲ್ವಂತೆ ॥

ಭರತೇಶ ವೈಭವ: ಕವಿ ಕಾವ್ಯಸಂಧಿ ೬೨-೬೪.

---

## ಸುಭಾಷಿತಗಳು

ಹಸ್ತಾದಪಿ ನ ದಾತವ್ಯಂ ಗೃಹಾದಪಿ ನ ದೀಯತೇ ।
ಪರೋಪಕರಣಾರ್ಥಾಯ ವಚನೇ ಕಾ ದರಿದ್ರತಾ ॥

ತನ್ನ ಕೈಯಿಂದ ತೆಗೆದು ಕೊಡಬೇಕಾಗಿಲ್ಲ. ತನ್ನ ಮನೆಯಿಂದಲೂ ಕೊಡಬೇಕಾಗಿಲ್ಲ. ಮಾತಿನ ವೆಚ್ಚದಿಂದಲೇ ಪರರಿಗೆ ಉಪಕಾರವಾಗುವಾಗ ಆ ಒಳ್ಳೆಯ ಮಾತನ್ನೂ ವೆಚ್ಚಮಾಡದೆ ಅದಕ್ಕೂ ಬಡತನವನ್ನೇಕೆ ಸಂಪಾದಿಸಿಕೊಳ್ಳಬೇಕು?

ತನ್ನ ಮಾತಿನಿಂದ ಪರರಿಗೆ ಉಪಕಾರವಾಗುವ ಹಾಗಿದ್ದರೆ ಆ ಮಾತನ್ನಾಡಲು ಹಿಂದೆಗೆಯಬಾರದು.

ಪದಸ್ಥಿತಸ್ಯ ಪದ್ಮಸ್ಯ ಮಿತ್ರೇ ವರುಣಭಾಸ್ಕರೌ ।
ಪದಚ್ಯುತಸ್ಯ ತಸ್ಯೈವ ಕ್ಲೇಶದಾಹಕರಾವುಭೌ ॥

ಜಲಾಭಿಮಾನಿ ದೇವತೆಯಾದ ವರುಣ, ಸೂರ್ಯ ಈ ಇಬ್ಬರೂ ನೀರಿನಲ್ಲಿ (ಒಳ್ಳೆಯ ಸ್ಥಾನದಲ್ಲಿ) ರುವವರೆಗೂ ತಾವರೆಗೆ ಗೆಳೆಯರೇ ಆಗಿರುತ್ತಾರೆ. ಅದೇ ತಾವರೆ ನೀರನ್ನು ಬಿಟ್ಟು ನೆಲದಲ್ಲಿರುವಾಗ ಅದೇ ವರುಣ ಮಳೆ ಸುರಿಸಿಯೂ, ಅದೇ ಸೂರ್ಯ ಬಿಸಿಲು ಕಾದೂ, ಅದನ್ನು ಕೊಳೆಯಿಸಿ ಒಣಗಿಸಿ ಅದರ ಶತ್ರುಗಳಾಗುತ್ತಾರೆ.

ಮಾನವನು ಒಳ್ಳೆಯ ಪದವಿಯಲ್ಲಿದ್ದಾಗ ಕೈಲಾದಮಟ್ಟಿಗೂ ಪರೋಪಕಾರ ಮಾಡಬೇಕು; ಪದಚ್ಯುತಿಯಾದಮೇಲೆ ಅವನಿಂದ ಏನು ಮಾಡುವುದಕ್ಕೂ ಸಾಧ್ಯವಾಗುವುದಿಲ್ಲ.

---

# ಸಾಹಿತ್ಯ ವಿವೇಚನೆ

ಶ್ರೀ ಬಿ. ವಿ. ಶ್ರೀನಿವಾಸಯ್ಯ, ಅರಕಲಗೂಡು

(ಕಳೆದ ಸಂಚಿಕೆಯಿಂದ ಮುಂದುವರಿದುದು)

೩

ಸೌಂದರ್ಯವೆನ್ನುವುದು ಒಂದು ಗುಣ. ಅದಕ್ಕೆ ಸಾಹಿತ್ಯಕಾರನು ರೂಪುಕೊಟ್ಟು ಮೂರ್ತೀಭೂತವನ್ನಾಗಿ ಮಾಡುತ್ತಾನೆ. ಸಾಹಿತಿಯ ದೃಷ್ಟಿ ಯಾವ ವಸ್ತುವಿನ ಮೇಲೆ ಬಿದ್ದರೂ ಅದು ಅದನ್ನು ಒಂದು ಕಾವ್ಯವನ್ನಾಗಿಯಾಗಲಿ ಒಂದು ನಾಟಕವಾಗಿಯಾಗಲೀ ಉಪನ್ಯಾಸವಾಗಿಯಾಗಲಿ ಅಥವಾ ಪ್ರಬಂಧವಾಗಿ ಆಗಲಿ ಆಗುವಂತೆ ಅದಕ್ಕೆ ರೂಪು ಕೊಡುತ್ತದೆ. ಅದನ್ನು ಸುಂದರವನ್ನಾಗಿ ಮಾಡುತ್ತದೆ. ಇಷ್ಟೇ ಅಲ್ಲದೆ ಸಾಹಿತ್ಯಕಾರನಿಗೆ ಒಂದು ಲೋಕಹಿತವೂ ಅಂತರ್ಗರ್ಭಿತವಾಗಿರುವ ಉದಾತ್ತಭಾವನೆಯೂ ಇರುತ್ತದೆ. ಮಾನವನು ಸೌಂದರ್ಯದ ಆರಾಧಕನೆಂಬುದು ಅವನಿಗೆ ಗೊತ್ತು. ಅವನ ಹೃದಯಮಂದಿರದಲ್ಲಿ ಯಾವತ್ತೂ ನಲಿದಾಡುವ ಪ್ರತಿಮೆಗಳನ್ನು ರಚಿಸಿದರೆ ಅವನಿಗೆ ಆನಂದ ಉಂಟಾಗುವುದೆಂದು ತಿಳಿದು ಸಾಹಿತಿಯು ಕಾವ್ಯನಾಟಕಗಳನ್ನು ರಚಿಸುತ್ತಾನೆ. ಸೌಂದರ್ಯ ಸೃಷ್ಟಿಯೇ ಕಲೆಯ ಚರಮ ಲಕ್ಷ್ಯ. ಇದೇ ದೃಷ್ಟಿಯಿಂದಲೇ ಅಮರಕವಿ ಕೀಟ್ಸನು "A thing of beauty is a Joy for ever"- ಸೌಂದರ್ಯಯುತ ವಸ್ತುವೇ ಆನಂದಕ್ಕೆ ಸದಾ ಆಕರ ಎಂದಿದ್ದಾನೆ. ಇದರಿಂದ ಕಲೆಯು ಸೌಂದರ್ಯ ಸೃಷ್ಟಿಮಾಡಿ ಆಮೂಲಕ ನಮ್ಮನ್ನು ಆನಂದಸಾಗರದಲ್ಲಿ ಮುಳುಗಿಸುತ್ತದೆ. ಇದು ಅದರ ನಿರ್ದಿಷ್ಟಗುರಿ. ಇದೇ ಅದರ ಉಚಿತ ಕರ್ತವ್ಯ. Art for Arts sake ಎನ್ನುವುದೊಂದು ವಿದ್ವಾಂಸರ ಮತವಿದೆ. ಆದರೆ ಕೆಲವು ವಿದ್ವಾಂಸರ ದೃಷ್ಟಿಯಲ್ಲಿ ಕಲೆಯು ಕಲೆಗೆ ಮಾತ್ರವಲ್ಲ, ಜೀವನಕ್ಕೆ ಎನ್ನುವುದು ವಾಡಿಕೆಯಾಗಿದೆ. ಅದರ ಧ್ಯೇಯವೇನೆಂದರೆ ನಾನು ಮನುಷ್ಯನಿಗೆ ನೀತಿಯನ್ನು ಬೋಧಿಸಬೇಕು; ಅವನನ್ನು ಸದಾಚಾರನನ್ನಾಗಿ ಮಾಡಬೇಕು ಎನ್ನುವುದು. ಇದು ನಮ್ಮ ಧಾರಣಾ ಶಕ್ತಿಗೆ ಮೀರಿದೆಯೋ ಏನೋ, ಹೇಗೇ ಇರಲಿ, ಇದು ಒಂದು ಭ್ರಾಂತಿ ಪೂರ್ಣವಾದ ಅಭಿಪ್ರಾಯವೆನ್ನಬೇಕು. ಕಲೆಯು ಜೀವನಕ್ಕೆ ಶ್ರೇಯಸ್ಕರವಾದುದು ಎಂದು ಹೇಳಬಹುದು. ಕಲೆಯು ಸೌಂದರ್ಯವನ್ನು ನಿರ್ಮಾಣ ಮಾಡುತ್ತದೆ. ಸೌಂದರ್ಯವು ಸತ್ಯವೇ ಆಗಿದೆ. ಸತ್ಯ ಮತ್ತು ಸೌಂದರ್ಯವು ನಮಗೆ ಪರ್ಯಾಯ ಶಬ್ದಗಳಾಗಿವೆ. ಈ ದೃಷ್ಟಿಯಿಂದ ಕೀಟ್ಸ್ ಕವಿಯ ಉಕ್ತಿಯು ಬಹಳ ಯುಕ್ತವೂ ಸಹಜವೂ ಆಗಿದೆ.

Beauty is truth, truth beauty, that is all
Ye know on earth, and all ye need to know

ಅರ್ಥವೇನೆಂದರೆ, ಸೌಂದರ್ಯವು ಸತ್ಯವೇ ಆಗಿದೆ; ಸತ್ಯವೇ ಸೌಂದರ್ಯ. ಇವೆರಡರ ಅನುಭೂತಿಯೇ ನಾವು ಈ ಸಂಸಾರದಲ್ಲಿ ತಿಳಿಯುವುದು, ತಿಳಿಯಬೇಕಾದ್ದೂ ಅಷ್ಟೆ. ಆದ್ದರಿಂದ ಸೌಂದರ್ಯವನ್ನು ಚಿಂತನೆ ಮಾಡುತ್ತಾ ಅದರ ಸತ್ಯ ಸ್ವರೂಪವನ್ನು ನಾವು ಯಾವಾಗ ಸಾಕ್ಷಾತ್ಕಾರ ಮಾಡುತ್ತೇವೆಯೋ ಆಗಲೇ ಅದು ನಮಗೆ ಹಿತಕರವಾಗುತ್ತದೆ. ಸತ್ಯಂ ಶಿವಂ ಸುಂದರಂ ಎನ್ನುವುದನ್ನು ಸುಂದರಂ ಸತ್ಯಂ ಶಿವಂ ಎಂದರೆ ಉಪಯುಕ್ತವೆಂದು ತೋರುತ್ತದೆ. ಕಾರಣವೇನೆಂದರೆ ಸೌಂದರ್ಯದಲ್ಲಿ ಸತ್ಯವು ಅಂತರ್ಗರ್ಭಿತವಾಗಿದೆ. ಸೌಂದರ್ಯವು ಸತ್ಯವನ್ನು ವಿಕಾಸಗೊಳಿಸುವುದೇ ಅದರ ಚರಮ ಲಕ್ಷ್ಯ. ಇದೇ ಅದರ ರಹಸ್ಯ. ಶ್ರೀ ಡಿ. ವಿ. ಜಿ. ಅವರ 'ಅಂತಃಪುರಗೀತೆ'ಯೊಂದರಲ್ಲಿ ಇದಕ್ಕೆ ಸಾಕಷ್ಟು ಪೋಷಣೆ ಸಿಕ್ಕುತ್ತದೆ. ಇದೂ ಅಲ್ಲದೆ ಕಲೆಯ ಮತ್ತೊಂದು ಕೆಲಸವೇನೆಂದರೆ ಧಾರ್ಮಿಕ ಹಾಗೂ ನೈತಿಕ ಶಿಕ್ಷೆಯೂ ಅದರ ಅಭಿನ್ನ ಅಂಗವಾಗಿದೆ. ಆದರೆ ವಾಚ್ಯವಾಗಿ ವ್ಯಕ್ತವಾಗುವುದಿಲ್ಲ; ವ್ಯಂಗ್ಯವಾಗಿರುತ್ತದೆ. ಈ ಧ್ಯೇಯವನ್ನೇ ಓರ್ವಕವಿ ಈ ವಾಕ್ಯಗಳಲ್ಲಿ ವ್ಯಕ್ತಪಡಿಸಿದ್ದಾನೆ–

Oh to what uses shall we put
The Wild-weed flower that simply blows
And, is there any moral shut
Within the bosom of the rose?
But any man who walks the mead
In bud or blade or bloom may find
According as his humours lead,
A meaning suited to his mind;

And liberal applications lie
In Art, like Nature, dearest friend,
So'twere to cramp its use if I
Should hook it to some useful end."

ಇದರಿಂದ ಕಲೆಯು ಶಿಕ್ಷಣವನ್ನು ಪ್ರಧಾನವಾಗಿಟ್ಟುಕೊಂಡಿಲ್ಲ. ಈ ಕಾರಣದಿಂದ ಅದು ಆಚಾರ ಮತ್ತು ಶಾಸ್ತ್ರದಿಂದ ಭಿನ್ನವಾಗಿದೆ. ಇಂಥಾ ಶಾಸ್ತ್ರಗಳು ಪ್ರಾಮುಖ್ಯವಾಗಿ ಶಿಕ್ಷಣರೂಪವಾದ ಆಚಾರ ವ್ಯವಹಾರಗಳನ್ನು ಬೋಧೆಮಾಡುವುವು. ಇವುಗಳ ಕಲೆ ಅಥವಾ ಸಾಹಿತ್ಯ ಕೋಟಿಯಲ್ಲಿ ಅಂತರ್ಗತವಾಗಲಾರವು. ನಾವು ಶಾಸ್ತ್ರ ವಿಚಾರವಾಗಿ ಏನನ್ನಾದರೂ ತಿಳಿಯಲು ಆವಶ್ಯಕತೆ ಇದ್ದರೆ ನೀತಿಶಾಸ್ತ್ರವನ್ನು ಓದಬೇಕು, ಮನುಸ್ಮೃತಿಯನ್ನು ಓದಬೇಕು. ಕಲೆಯ ಮುಖ್ಯ ಉದ್ದೇಶವೇನೆಂದರೆ ಸೌಂದರ್ಯ ನಿರ್ಮಾಣದ್ವಾರಾ ನಮ್ಮನ್ನು ಆನಂದಿತರನ್ನಾಗಿ ಮಾಡುವುದು. ಕಲೆಗಾರನು ಸೌಂದರ್ಯಭಾವನೆಗಳಿಂದ ಪ್ರೇರಿತನಾಗಿ ಯಾವುದಾದರೊಂದು ವಸ್ತುವನ್ನು ನಿರ್ಮಾಣ ಮಾಡುತ್ತಾನೆ. ಅವನಿಗೆ ಎಲ್ಲ ಭಾವನೆಗಳೂ, ಎಲ್ಲ ವಿಚಾರಗಳೂ ಎಲ್ಲ ಕಲ್ಪನೆಗಳೂ ಸುಂದರರೂಪವನ್ನು ತಾಳುತ್ತವೆ. ಇದಕ್ಕೆ ಅವನು ತನ್ನ ಕೃತಿಗಳಲ್ಲಿ ಆಕಾರವನ್ನು ಕೊಡುತ್ತಾನೆ. ಇದರಿಂದ ಅವನಿಗೆ ಸಾರ್ಥಕತೆಇದೆ; ಸಾಫಲ್ಯತೆಇದೆ. ಯಾವ ಕೃತಿಗಳಲ್ಲಿ ಸೌಂದರ್ಯ ರೂಪವೇ ಹೆಚ್ಚು ಪ್ರಾಧಾನ್ಯತೆಹೊಂದಿ ಉಪದೇಶ ತತ್ವಗಳು ಕಡಿಮೆಯಾಗಿವೆಯೋ ಅವು ಉಚ್ಚ ಶ್ರೇಣಿಗೆ ಸೇರಿದವು. ಯಾವ ಕೃತಿಯಲ್ಲಿ ಉಪದೇಶವೇ ಹೆಚ್ಚಾಗಿ ಸೌಂದರ್ಯ ತತ್ವಗಳು ಕಡಿಮೆಯಾಗಿವೆಯೋ ಅಂತಹವುಗಳು ಕಲಾದೃಷ್ಟಿಯಿಂದ ಮಹತ್ವದಲ್ಲಿ ಕಡಿಮೆಯೆಂದು ಹೇಳಬಹುದು. ಇದೇ ದೃಷ್ಟಿಯಿಂದಲೇ ಆಂಗ್ಲ ನಾಟಕಕರ್ತೃವಾದ ಜಿ. ಬಿ. ಎಸ್.ರವರ ನಾಟಕಗಳನ್ನು ನಾವು ನೋಡಬೇಕಾಗಿದೆ. ಕಲಾಮರ್ಮಜ್ಞನು ಷಾರವರ ನಾಟಕಗಳನ್ನು ಕಲೆಯೆಂದು ಕರೆಯಲಾರನು. ಪ್ರಚಾರಕವೆಂದು ತಿಳಿಯುತ್ತಾನೆ. ಕಲಾ ನಿರ್ಮಾಪಕನು ತನ್ನ ಉಪದೇಶಾತ್ಮಕವಾದ ಆದರ್ಶವನ್ನು ಬಿಟ್ಟು ಸೌಂದರ್ಯ ನಿರ್ಮಾಣಮಾಡಿದರೆ ಆಗ ಅಗ್ರೇಸರನಾಗುತ್ತಾನೆ. ಒಟ್ಟಿನಲ್ಲಿ ಇಷ್ಟು ಹೇಳಬಹುದು. ಕಲೆಯು ಎಂದಿಗೂ ಶಿಕ್ಷಣರೂಪವಾಗಿರಕೂಡದು. ಶಿಕ್ಷಣವು ಒಂದುರೂಪದಲ್ಲಿ ಆಗುವುದೇನೋ ನಿಜವಾದರೂ ಅದು ಎಷ್ಟುಮಟ್ಟಿಗೆ ಮತ್ತು ಹೇಗೆ ಎನ್ನುವುದೇ ಬಹುಮುಖ್ಯವಾದ ವಿಚಾರ. ಕಲೆಯು ಪ್ರಕೃತಿ ಮತ್ತು ಜೀವನದ ಆದರ್ಶಾತ್ಮಕ ತತ್ವವನ್ನು ವ್ಯಂಜನ ಮಾಡುತ್ತದೆ. ಅದನ್ನು ಅದು ಸುಂದರ ರೂಪದಲ್ಲಿ ನಮ್ಮ ಮುಂದೆ ಇಡುತ್ತದೆ. ಆದರ ಬರೀ ಬಾಹ್ಯ ಸ್ವರೂಪವನ್ನು ಮಾತ್ರ ನಮ್ಮ ಕಣ್ಣುಮುಂದೆ ಇಡುವುದಿಲ್ಲ. ಅವುಗಳ ಅಂತರ್ಗತವಾದ ಆದರ್ಶರೂಪವಾದ ತತ್ವಗಳನ್ನು ಪ್ರತ್ಯಕ್ಷೀಕರಣಮಾಡುತ್ತದೆ.

ಒಟ್ಟಿನಲ್ಲಿ ಮೇಲೆ ಹೇಳಿದ ಉಪಯುಕ್ತವಾದ ಉದಾಹರಣೆಗಳಿಂದ ಇಷ್ಟು ಸ್ಪಷ್ಟವಾಗುವುದು. ಅದೇನೆಂದರೆ, ಕಲೆಯ ಮುಖ್ಯ ಉದ್ದೇಶವು ಶಿಕ್ಷಣವಲ್ಲ. ಅದು ಸೌಂದರ್ಯಪ್ರಧಾನವಸ್ತುವಾಗಿದೆ. ಕಲೆಯು ನೀತಿಯನ್ನು ಉಪದೇಶಮಾಡುತ್ತೇನೆಂದು ಉಚ್ಚಸ್ವರದಿಂದ ಕೂಗುವುದಿಲ್ಲ. ಆದರೆ ಪ್ರಕೃತಿಯಲ್ಲಡಗಿರುವ ನಿಗೂಢ ತತ್ವಗಳನ್ನು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ನಮ್ಮ ಕಣ್ಣಿಗೆ ಕಾಣಿಸುತ್ತದೆ. ಪಕ್ಷಿಗಳ ಮಧುರ ಗಾನದಲ್ಲಿ, ಪುಷ್ಪಗಳ ಸೌಂದರ್ಯದಲ್ಲಿ, ಸರಿತ್ತುಗಳಲ್ಲಿನ ಕಲಕಲನಿನಾದಗಳಲ್ಲಿ, ಪೃಥ್ವಿ ಹಾಗೂ ಆಕಾಶಗಳಲ್ಲಿ, ಪ್ರಭಾತ ಹಾಗೂ ಸಂಧ್ಯಾಗಳಲ್ಲಿ, ಅನುಪಮವಾದ ಶಿಕ್ಷಣದ ರಹಸ್ಯಗಳು ಅಡಗಿವೆ. ನಾವು ನಮ್ಮ ಅಂತಶ್ಚಕ್ಷುಗಳನ್ನು ಉನ್ಮೀಲನಮಾಡಿಕೊಂಡು ಆದರ ಭಾವನಾವಿಶೇಷಗಳನ್ನು ನಾವು ಗ್ರಹಣಮಾಡುತ್ತೇವೆ. ಇದರಿಂದ ಅತಿಶಯವಾದ ಲಾಭವೂ ದೊರೆಯುತ್ತದೆ. ಮುಖ್ಯವಾಗಿ ಶಿಕ್ಷಣರೂಪದಲ್ಲಿ ಹೇಳಬೇಕೆಂಬುದು ಕತೆಗಾರನ ಧ್ಯೇಯವಲ್ಲ; ಗುಣವೂ ಅಲ್ಲ.

ಎಲ್ಲರೂ ಈ ರೀತಿ ಹೇಳಬಹುದು. ಈಶ್ವರ ನಿರ್ಮಿತ ಪ್ರಕೃತಿ ಹಾಗೂ ಜೀವನ ಇವುಗಳಲ್ಲಿ ಕಲೆಗಾರನು ತನ್ನ ಕೃತಿಗಳಲ್ಲಿ ಪರ್ಯಾಪ್ತಮಾಡಬಲ್ಲನೇ? ಅದು ಸಾಧ್ಯವೇ ಇಲ್ಲ. ಅವನ ಸೃಷ್ಟಿಯಲ್ಲಿಯೂ ದೋಷವಿದೆಯಲ್ಲವೇ? ಅದನ್ನು ಕಲೆಗಾರನು ದೂರ ಮಾಡಲು ಪ್ರಯಾಸ ಮಾಡುತ್ತಾನೆ ಅಲ್ಲವೇ? ಸಂಸಾರದಲ್ಲಿನ ಚಿತ್ರಗಳನ್ನು ರಚಿಸುವ ಕಲೆಗಾರನು ದುಸ್ಸಾಧ್ಯವಾದುದೇನನ್ನೂ ಹೇಳುವುದಿಲ್ಲ. ಅವನ ಅಪೇಕ್ಷೆ ಏನೆಂದರೆ ಈ ಜಗತ್ತು ಓರ್ವಸೃಷ್ಟಿಕರ್ತನಿಂದ ಆಗಿದೆಯೆಂದೂ, ಅಂಥಾ ಪರಮಾತ್ಮನಿಂದ ರಚಿತವಾದ ಸೌಂದರ್ಯವನ್ನು ಪ್ರತಿಮಾನವನೂ ಕಾಣಬೇಕೆನ್ನುತ್ತಾನೆ. ಇವುಗಳೆಲ್ಲವೂ ಬರೀ ಆದರ್ಶಾತ್ಮಕ ವ್ಯಂಜನ ರೂಪವಾದುದೆಂದು ಹೇಳುವುದು ಬರೀ ಬಾಯಿ

ಮಾತಲ್ಲವೆ? ಸೂರ್ಯೋದಯವೇನು? ಸೂರ್ಯಾಸ್ತವೇನು? ಹೀಗೆ ಇನ್ನೂ ಅನೇಕ ಪ್ರಕೃತಿಯ ದೃಶ್ಯಗಳು ಚಿತ್ರೀಕರಣ ಮಾಡಿದ ಮಾತ್ರಕ್ಕೆ ಅವೇನೂ ಅಷ್ಟು ಕಠಿನವಲ್ಲವಲ್ಲವೇ? ಇವೆಲ್ಲಾ ಪೂರ್ವಪಕ್ಷವನ್ನು ನಾವು ಒಪ್ಪುತ್ತೇವೆ. ಆದರೂ ಕಲೆಗಾರನು ಮುಖ್ಯವಾಗಿ ಪ್ರಕೃತಿ ಮತ್ತು ಜೀವನದ ನಿಗೂಢ ತತ್ವಗಳನ್ನು ತನ್ನ ಕೃತಿಯಲ್ಲಿ ಪ್ರತ್ಯಕ್ಷೀಕರಣ ಮಾಡುತ್ತಾನೆ. ಇಷ್ಟು ಮಾತ್ರಕ್ಕೆ ಎಲ್ಲ ಮನುಷ್ಯರೂ ಪ್ರಕೃತಿ ಮತ್ತು ಜೀವನವನ್ನು ಈ ದೃಷ್ಟಿಯಿಂದ ನೋಡುತ್ತಾರೆಂಬುದು ಒಪ್ಪದ ಮಾತು. ಏಕೆಂದರೆ ಕಲೆಗಾರನ ದೃಷ್ಟಿಯೇ ಬೇರೆ, ಸಾಮಾನ್ಯ ಮನುಷ್ಯನಂತೆ ಅಲ್ಲ. ಅವನು ತನ್ನ ಉನ್ಮೀಲಿತ ದಿವ್ಯ ಚಕ್ಷುಗಳಿಂದ ಪ್ರಕೃತಿ ಹಾಗೂ ಜೀವನದಲ್ಲಿನ ನಿಗೂಢ ತತ್ವಗಳನ್ನು ನಿರ್ನಿಮೇಷ ಮಾಡುತ್ತಾನೆ. ಇದರಿಂದ ಅವನು ಅವುಗಳಿಗೆ ಒಂದು ಸೌಂದರ್ಯರೂಪವನ್ನು ಕೊಡುತ್ತಾನೆ. ಅದನ್ನು ಜನತೆಯ ಮುಂದೆ ಇಡುತ್ತಾನೆ. ಪಕ್ಷಿಯು ಅವನ ದೃಷ್ಟಿಯಲ್ಲಿ ಸಾಮಾನ್ಯವಾದುದಲ್ಲ. ವೃಕ್ಷದ ಛಾಯೆಯೂ ಅವನ ದೃಷ್ಟಿಯಲ್ಲಿ ಸಾಮಾನ್ಯವಾದುದಲ್ಲ. ವನದಲ್ಲಿನ ಮರಗಳನ್ನು ಅವನು ನೋಡುವ ದೃಷ್ಟಿಯೆ ಬೇರೆ. ಸೂರ್ಯನ ಕಿರಣಗಳು ಕೂಡ ಅವನ ದೃಷ್ಟಿಯಲ್ಲಿ ಒಂದು ಆಕರ್ಷಕ ರೂಪನ್ನು ತಾಳುತ್ತದೆ. ಷೆಲ್ಲಿಯು ಸ್ಕೈಲಾರ್ಕ್ ಪಕ್ಷಿಯನ್ನು ಈ ರೀತಿ ಸ್ವಾಗತ ಮಾಡುತ್ತಾನೆ.

> Hail to thee, blithe spirit,
> Bird thou never wert !

ಓ, ಆನಂದಮಯ ಜೀವವೇ, ನಾನು ನಿನ್ನನ್ನು ಸ್ವಾಗತಿಸುತ್ತೇನೆ. ನೀನು ಸಾಮಾನ್ಯ ಪಕ್ಷಿಯಲ್ಲ. ಇದೇ ರೀತಿಯಲ್ಲಿ ಶ್ರೀ ಕುವೆಂಪುರವರು ಮರದ ಛಾಯೆಯನ್ನು ನೋಡಿ ಅನ್ನುತ್ತಿರುತ್ತುವುದು 'ಎಲ್ಲ ಹಾಳಾದರೂ ಹಾಳಾಗಲಿ ಸ್ವಾತಂತ್ರ್ಯ ಒಂದೇ ಸಾಕು.' ಇದು ಭೌತಶಾಸ್ತ್ರಜ್ಞನಿಗೆ ಒಪ್ಪದ ಮಾತು, ಪ್ರಕೃತಿ ನಿಯಮಕ್ಕೆ ಮೀರಿದ ಮಾತು. ಆದರೆ ಕವಿ ಕಾಣುವುದೇನು? ಪಡಿನೆರಳಿನಂತೆ ಇರುವ ಅಸ್ವಾತಂತ್ರ್ಯತೆಗೆ ಧಿಕ್ಕಾರ! ಏನಾದರೂ ಆಗಲಿ ಸ್ವಾತಂತ್ರ್ಯ ಹೆಚ್ಚು, ಅಷ್ಟೇಕೆ ಅದೇ ಸರ್ವಸ್ವ ಅವನಿಗೆ.

ಮುಖ್ಯವಾಗಿ ಇಷ್ಟು ನಮಗೆ ಸ್ಪಷ್ಟವಾಗುತ್ತದೆ. ಕಲೆಯು ಬರೀ ಬಾಹ್ಯ ಪ್ರಕೃತಿ ಮತ್ತು ಜೀವನವನ್ನು ಚಿತ್ರೀಕರಿಸುವುದು ಮಾತ್ರವಲ್ಲದೆ ಅದರ ಅಂತರ್ಗತ ತತ್ವವನ್ನು ವ್ಯಾಖ್ಯಾನಮಾಡುತ್ತದೆ. ಇಷ್ಟುಮಾತ್ರವೇ ಅಲ್ಲ. ಕಲೆಯು ಸುಂದರ ಪ್ರಕೃತಿಯನ್ನು ಹೆಚ್ಚು ಸುಂದರವನ್ನಾಗಿ ಮಾಡುತ್ತದೆ. ಷೆಲ್ಲಿ ಕವಿಯು Adonais ಎಂಬ ಕವಿತೆಯಲ್ಲಿ ಕೀಟ್ಸ್ ಕವಿಯ ವಿಚಾರವಾಗಿ ಈ ಮಾತನ್ನು ಹೇಳುತ್ತಾನೆ. "He is a part of the loveliness which he made more lovely" ಸಾರಾಂಶ, ಅವನು ಸುಂದರ ರೂಪಿನ ಭಾಗವೇ, ಕಾರಣವೇನೆಂದರೆ ಅವನು ಸುಂದರ ವಸ್ತುವನ್ನು ಸುಂದರತರವನ್ನಾಗಿ ಮಾಡಿದನು. ಕಾರಣ ಕೀಟ್ಸನು ಓರ್ವ ಮಹಾಕವಿ ಆಗಿದ್ದಾನೆ. ಕಲೆಯು ಸತ್ಯವನ್ನು ಹೇಳುತ್ತದೆ. ಸೌಂದರ್ಯವನ್ನು ನಿರ್ಮಾಣ ಮಾಡುತ್ತದೆ. ನಾವೆಲ್ಲರೂ ಜೀವನ ಹಾಗೂ ಪ್ರಕೃತಿಯ ವಿಚಾರವಾಗಿ ಮಾತನಾಡುತ್ತೇವೆ. ಆದರೆ ಎಷ್ಟು ಜನ ಏನಾದರೂ ಒಂದು ಸೌಂದರ್ಯುತವಾದ ಸೃಷ್ಟಿಯನ್ನು ಮಾಡಿದ್ದೇವೆ? ಮುಖ್ಯಕಾರಣವೇನೆಂದರೆ ಕಲೆಗಾರನು ಬರೀ ಬಾಹ್ಯ ಜೀವನವನ್ನೂ ಪ್ರಕೃತಿಯನ್ನೂ ನೋಡಿ ಅಷ್ಟಕ್ಕೇ ತೃಪ್ತನಾಗುವುದಿಲ್ಲ. ಅವನು ಅವುಗಳಿಗೆ ಒಂದು ಸ್ವರೂಪವನ್ನು ಕೊಡುತ್ತಾನೆ. ಆದರೆ ನಾವು ಮಾತ್ರ ಅದಕ್ಕೆ ಪೂರ್ವವೇ ನೋಡಿದ್ದರೂ ಅದರಲ್ಲಿ ಇಷ್ಟು ಭಾವನೆ, ನವೀನತೆಯನ್ನು ನಾವು ಕಂಡಿರುವುದಿಲ್ಲ. ಅವನ ಮನಸ್ಸು ಒಂದು ಪರಿಶೋಧನಶಾಲೆ, ನಿರ್ಮಾಣಗೃಹ. ಯಾವುದಾದರೂ ವಸ್ತು ಅಥವಾ ದೃಶ್ಯವನ್ನು ನೋಡಿದ ಮಾತ್ರವೇ ಅದನ್ನು ಅವನು ತನ್ನ ಪರಿಶೋಧನಾಲಯಕ್ಕೆ ತೆಗೆದುಕೊಂಡು ಹೋಗುತ್ತಾನೆ. ಅಲ್ಲಿ ಅಗ್ರಾಹ್ಯವಾದ ಮತ್ತು ಅನಾವಶ್ಯಕವಾದ ಅಂಗವನ್ನು ನಿರಾಕರಣೆ ಮಾಡುತ್ತಾನೆ. ಅನಂತರ ವಿಚಾರ ಹಾಗೆಯೇ ಕಲ್ಪನಾ ಮೂಲಕ ಸೌಂದರ್ಯ ದರ್ಶನಕ್ಕೆ ಅನುಕೂಲವಾಗುವಂತೆ ಒಂದು ವಸ್ತು ನಿರ್ಮಾಣಮಾಡುತ್ತಾನೆ. ಅದು ಜೀವನ ಹಾಗೂ ಪ್ರಕೃತಿಯನ್ನು ಅವಲಂಬಿಸಿದ ಕೃತಿಯಾಗಿರುತ್ತದೆ. ಇಷ್ಟುಮಾತ್ರವೇ ಅಲ್ಲ. ಅದು ಸರ್ವಾಂಗ ಸುಂದರವಾಗಿಯೂ ನವನವೀನವಾಗಿಯೂ ಇರುತ್ತದೆ. ಇಂಥಾ ವಸ್ತುವನ್ನು ನೋಡಿ ಅನಾಯಾಸವಾಗಿ ನಾವು ಆಹ್ಲಾದಗೊಂಡು "ಆಹಾ ಎಂಥ ಕೃತಿ ಇದು; ಎಷ್ಟು ಸುಂದರವಾಗಿದೆ" ಎನ್ನುತ್ತೇವೆ.

೪

ಆಧುನಿಕ ಕಾಲದಲ್ಲಿ ಕಲೆಯ ಮತ್ತೊಂದು ರೂಪವು ತಲೆಯೆತ್ತಿದೆ. ಅದರ ಹೆಸರು Realistic Art ಎಂದು

ಕರೆಯುತ್ತಾರೆ. ಇದು ಕಲೆಯ ಅನುಯಾಯಿ. ಬಾಹ್ಯ ಜೀವನವನ್ನೂ ಹಾಗೆಯೇ ಪ್ರಕೃತಿಯ ಪೂರ್ಣ ಚಿತ್ರವನ್ನೂ ನಮಗೆ ಕೊಡುತ್ತದೆ. ಅವುಗಳ ಫೋಟೋ ಎಂದು ನಾವು ಸಾಮಾನ್ಯವಾಗಿ ಹೇಳಬಹುದು. ಇದರ ಮುಖ್ಯ ಕಾರಣವೇನೆಂದರೆ ಜೀವನದ ಯಾಥಾತಥ್ಯವನ್ನು ತಿಳಿಸುವುದು. ಇದರ ವಿಚಾರವಾಗಿ ನಾನು ಇಷ್ಟನ್ನು ತಿಳಿದುಕೊಂಡಿರುತ್ತೇನೆ. ಅದೇನೆಂದರೆ ಇದಕ್ಕೂ ಕೂಡ ಒಂದು ವಿಧವಾದ ಯೋಗ್ಯತೆ ಬೇಕು. ಇದರ ಸಾಫಲ್ಯತೆಯಾಗಬೇಕಾದರೆ ಸೂಕ್ಷ್ಮ ನಿರೀಕ್ಷಣ ಶಕ್ತಿಯೂ ಬೇಕು. ಇದನ್ನು ಸ್ವೀಕಾರ ಮಾಡಲಿ ಬಿಡಲಿ ಇದು ಕೂಡ ಉಚ್ಚಕೋಟಿಯ ಕಲೆ ಎಂದು ಹೇಳಬಹುದು. ಆದರೂ ಇವುಗಳಲ್ಲಿ ರಚನಾತ್ಮಕ ಹಾಗೂ ಆದರ್ಶಾತ್ಮಕ ತತ್ವಗಳ ಅಭಾವವೇನೋ ಇರುತ್ತದೆ. ಈ ಕಲೆಗಾರನು ಬಾಹ್ಯ ರೂಪಗಳನ್ನು ಮಾತ್ರ ಚಿತ್ರೀಕರಣಮಾಡುತ್ತಾನೆ. ಅಂತಃಪ್ರದೇಶಗಳನ್ನೂ, ಹೃದಯವೇದನೆಯನ್ನೂ ಅವನು ನಮಗೆ ಕಾಣಿಸಲಾರನು. ಅದರ ಆತ್ಮವನ್ನೂ ನಮಗೆ ತೋರಿಸಲಾರನು. ಏನೇ ಇರಲಿ, ಇವುಗಳಲ್ಲಿ ನಿರ್ಧನ ಹಾಗೂ ನಿಮ್ನ ಕೋಟಿಯ ಮನುಷ್ಯಜೀವನದ ನಿರೂಪಣೆಯನ್ನು ನಾವು ಸ್ತೋತ್ರ ಮಾಡಬೇಕಾಗಿದೆ. ಅವರು ಕೂಡ ವಿಚಾರ ಹೀನ, ಹೃದಯಹೀನ ಪ್ರಾಣಿಗಳೇನೂ ಅಲ್ಲ. ಪ್ರಾತಃಕಾಲದಿಂದ ಪ್ರಾರಂಭವಾಗಿ ಸಂಧ್ಯಾಕಾಲದವರೆಗೂ ಅನವರತವೂ ಕಾರ್ಯ ಮಾಡುತ್ತಿರಬೇಕೆಂದಾಗಲೀ, ಊಟಮಾಡಬೇಕು ಆಮೇಲೆ ಮಲಗಬೇಕೆಂದಾಗಲಿ, ಜಗಳವಾಡಬೇಕೆಂದಾಗಲಿ, ಅವಾಚ್ಯ ಮಾತುಗಳಿಂದ ಬೈಯಬೇಕೆಂದಾಗಲಿ ಅವರ ಜೀವನದ ವಾಸ್ತವಿಕತೆಯಲ್ಲ. ಇಂಥಾ ನಿರೂಪಣೆಗಳೇನಾದರೂ ಇದ್ದಲ್ಲಿ ಅವು ಪೂರಾ ಸುಳ್ಳು ಮತ್ತು ವಾಸ್ತವಿಕತೆಗೆ ಅವು ಬಹು ದೂರ ಎಂದು ಹೇಳಬಹುದು. ಅವರ ಮನಸ್ಸಿನಲ್ಲಿಯೂ ಸದ್ವಿಚಾರಗಳು ಉದ್ರೇಕಗೊಳ್ಳುತ್ತವೆ. ಅವರ ಹೃದಯವು ಸದ್ಭಾವನೆಗಳಿಂದ ಸ್ಪಂದಿತವಾಗುತ್ತದೆ. ದಯೆ, ದಾಕ್ಷಿಣ್ಯ, ಉದಾರತೆ, ಪ್ರೇಮ, ಭ್ರಾತೃಭಾವನೆಗಳು ಅವರಿಗೂ ಅಮೂಲ್ಯ ನಿಧಿಗಳಾಗಿವೆ. ಎಷ್ಟುಮಟ್ಟಿಗೆ ಅವರಿಗೆ ಅವರ ಜೀವನವು ನೀರಸವಾಗಿಲ್ಲದೆ, ಶುಷ್ಕ ಹಾಗೂ ಪ್ರೇಮವಿಹೀನವಾಗಿಲ್ಲವೋ ಅಷ್ಟರಮಟ್ಟಿಗೆ ಪ್ರತ್ಯಕ್ಷವಾದೀ ಕಲೆಗಾರ ಅವನ ಕೃತಿಗಳಲ್ಲಿ ಅವುಗಳನ್ನೂ ಪ್ರದರ್ಶನ ಮಾಡಲು ಸಾಧ್ಯವಾಗುತ್ತದೆ. ಅಂತರಂಗದಲ್ಲಿ ಅವರೂ ಮನುಷ್ಯರೇ. ಅವರ ಜೀವನವು ಅಮಾವಾಸ್ಯೆಯಂತೆ ಸಂಪೂರ್ಣ ಕತ್ತಲೆಯಿಂದ ಆವರಿಸಿಲ್ಲ. ಇಷ್ಟು ಅಂಧಕಾರದ ಹಿಂದೆ ಪ್ರಕಾಶವು ಅಡಗಿದೆ. ಇಷ್ಟು ಘೋರ ನಿರಾಶೆಯಲ್ಲಿಯೂ ಆಶೆ ಇದೆ. ಅವರ ಅನಾಕರ್ಷಕ ಜೀವನದ ಬುಡದಲ್ಲಿ ಆಕರ್ಷಣೆಯೂ ಇದೆ. ಇವು ಉಚ್ಚಕೋಟಿಯ ಕಲಾಮರ್ಮಜ್ಞನ ದೃಷ್ಟಿಗೆ ಗೋಚರವಾಗುತ್ತವೆ. ಹಾಗೆಯೇ ಅವುಗಳ ನಿರೂಪಣೆಯನ್ನು ಅವನು ತನ್ನ ಕೃತಿಗಳಲ್ಲಿ ತೋರಿಸುತ್ತಾನೆ. ಇವುಗಳ ಆಕರ್ಷಣೆ, ಇವುಗಳ ಸೌಂದರ್ಯ, ಜೀವನದ ಹಾಗೂ ಪ್ರಕೃತಿಯ ಅಮರ ಸತ್ಯನಿರೂಪಣೆ ನಮಗೆ ಕಂಡುಬರುತ್ತದೆ. ತನ್ನ ಕೃತಿಗಳಲ್ಲಿ ಅವನು ಜೀವನದ ಆದರ್ಶಗಳನ್ನು ನಿರೂಪಿಸಬಲ್ಲನು; ಕಲಾಪ್ರಪಂಚದಲ್ಲಿ ಸೌಂದರ್ಯಮೂರ್ತಿಗಳನ್ನು ಎರಕ ಹೊಯ್ಯುತ್ತಾನೆ ಸತ್ಯದರ್ಶನಕ್ಕೆ, ಜೀವನದ ಸಾಫಲ್ಯಕ್ಕೆ, ಅದು ಇಲ್ಲದಿರುವವನಿಗೆ ದೃಷ್ಟಿಯು ಮಂದವಾಗಿರುತ್ತದೆ. ಕಣ್ಣಿನಲ್ಲಿ ಕಾಮಾಲೆ ರೋಗವಿರುತ್ತದೆ. ಅವನು ದಿವ್ಯದೃಷ್ಟಿ ವಿಹೀನನು. ಇದರಿಂದ ಯಾರು ಇಂಥಾ ದೃಷ್ಟಿಯುಳ್ಳವರಲ್ಲವೋ ಅಂಥಾವರ ಕಲೆಯು ನೀಚಕೋಟಿಗೆ ಸೇರಿದುದು. ಉತ್ಕೃಷ್ಟ ಸಾಹಿತಿಗೆ ದಿವ್ಯದೃಷ್ಟಿ ಅತ್ಯಂತ ಅವಶ್ಯಕ. ಇನ್ನೂ ಕೆಲವು ಗುಣಗಳು ಅತ್ಯಾವಶ್ಯಕವಾಗಿರಬೇಕು. ಅವು ಯಾವುವೆಂದರೆ ಅವನಿಗೆ ಭಾಷೆಯ ಮೇಲೆ ಆಧಿಪತ್ಯವಿರಬೇಕು, ಅನುಭೂತಿ, ಭಾವನೆಗಳು, ವಿಚಾರ ಮತ್ತು ಕಲ್ಪನಾಶಕ್ತಿ ಇರಬೇಕು. ಈ ಉಪಯುಕ್ತ ಗುಣಸಂಪನ್ನನಾದ ಸಾಹಿತಿಯ ಕೃತಿಗಳು ಸಂಸಾರದಲ್ಲಿ ಅಮರವಾಗಿ ನಿಲ್ಲುತ್ತವೆ.

ಈ ಮೇಲೆ ಹೇಳಿದ ಸೂತ್ರಗಳನ್ನು ನಾವು ಕೆಲವು ಸಾಹಿತ್ಯಕೃತಿಗಳಿಗೆ ಒರೆಹಚ್ಚಿ ನೋಡಬೇಕು. ಆಗಲೇ ಅವುಗಳ ನಿಜವಾದ ಬಣ್ಣ ಗೊತ್ತಾಗುತ್ತದೆ. ಅತ್ಯಂತ ಪ್ರಖ್ಯಾತರಾದ, ಗಾಂಧೀಜಿಯವರು 'ಗುರು' ಎಂದು ಕರೆಯುತ್ತಿದ್ದ, ರಷ್ಯಾದೇಶದ ಟಾಲ್‌ಸ್ಟಾಯ್‌ರವರ ಕೃತಿಗಳ ಬಗ್ಗೆ ನಾವು ನೋಡಿದರೆ ಈ ಉದಾತ್ತ ಧ್ಯೇಯವು ಸಂಪೂರ್ಣವಾಗಿ ಪ್ರತಿಷ್ಠಿತವಾಗಿದೆ. ಶ್ರೀಮಾನ್ ಎಲ್. ಗುಂಡಪ್ಪನವರು ಬರೆದಿರುವ ಟಾಲ್‌ಸ್ಟಾಯ್‌ರವರ ಕತೆಗಳನ್ನು ಬಹುಶಃ ಅನೇಕರು ಓದಿರಬಹುದು. ಅವುಗಳಲ್ಲಿ ಚಿತ್ರಿಸಿರುವ ವ್ಯಕ್ತಿಗಳು, ಅವುಗಳಲ್ಲಿ ಅಡಕವಾಗಿರುವ ತತ್ವಗಳು ಯಾವುದೇ ಕಾಲಕ್ಕಾಗಲೀ, ಯಾವುದೇ ಜನಾಂಗಕ್ಕಾಗಲೀ ಭೂಷಣಪ್ರಾಯ. ಇದನ್ನು ನೋಡಿಯೇ ಬೇರ್ನ

ತತ್ವಜ್ಞಾನಿಯು ಪುಸ್ತಕಗಳನ್ನು ೨ ವಿಧವಾಗಿ ವಿಭಾಗ ಮಾಡಿದ್ದಾನೆ. (೧) ತಾತ್ಕಾಲಿಕವಾದ ಪುಸ್ತಕಗಳು, (೨) ಸರ್ವಕಾಲಕ್ಕೂ ಸರ್ವಜನಾಂಗಕ್ಕೂ ಬೇಕಾದ ಪುಸ್ತಕಗಳು. ಈ ದೃಷ್ಟಿಯಿಂದ ನಾವು ನೋಡಿದಲ್ಲಿ ಇತ್ತೀಚೆಗೆ ವಿಚಾರ ವಾದಿಗಳೆಂದು ಡಂಗುರ ಹೊಡೆದು ಹೇಳಿಕೊಳ್ಳುತ್ತಿರುವ 'ಪ್ರಗತಿ ಶೀಲ ಸಾಹಿತಿ'ಗಳ ಕೃತಿಗಳನ್ನು ನಾವು ನೋಡಿದಲ್ಲಿ ಎಷ್ಟುಮಟ್ಟಿಗೆ ಅವು ತೂಕಕ್ಕೆ ಏರುತ್ತವೆ ಎಂಬುದನ್ನು ನಾವು ಗೊತ್ತುಹಿಡಿಯಬಹುದು. ಈ ಸಾಹಿತಿಗಳ ಮುಖಂಡರಾದ ಶ್ರೀ ಅ. ನ. ಕೃ. ರವರ ಕೃತಿಗಳನ್ನು ನೋಡೋಣ. 'ಜೀವನ ಯಾತ್ರೆ' ಎಂಬುದು ಇವರ ಕಾದಂಬರಿಗಳಲ್ಲೊಂದು. ಇದರಲ್ಲಿ 'ಮುನ್ನುಡಿ–ಹಿನ್ನುಡಿ'ಗಳಲ್ಲಿ ಹೆಚ್ಚು ವಿಚಾರವನ್ನು ಪ್ರಸ್ತಾಪಮಾಡಿದ್ದಾರೆ. ಒಂದೂ ಸಮಾಜದ ಧ್ಯೇಯವನ್ನು ತುಚ್ಛೀಕರಿಸಿದ್ದಲ್ಲದೆ ಅದರ ಮಾರ್ಪಾಟಿಗೆ ಅತ್ಯಂತ ಹೇಯವಾದ ಕಥಾನಿರೂಪಣೆಯಿದೆ. 'ಜೀವನ ಯಾತ್ರೆ'ಯೆಂಬ ಶಿರೋನಾಮೆಯನ್ನು ನೋಡಿ ಏನಾದರೂ ಆದರ್ಶ ಜೀವನವಿದೆಯೋ ಏನೋ ಎಂದು ಕುತೂಹಲದಿಂದ, ಪಂಪಾಯಾತ್ರೆ, ವಾರ್ಧಾಯಾತ್ರೆ ಮುಕ್ಕಣ್ಣಯಾತ್ರೆಗಳಂತೆ, ವರ್ಣರಂಜಿತವಾದ, ಆಕರ್ಷಕವಾದ ಹಾಗೂ ಪ್ರಗತಿ ಯೋಗ್ಯವಾದ ಭಾವನೆಗಳಿವೆಯೋ ಎಂದು ಓದಿದ ನನಗೆ ನಿರಾಶೆಯೂ ಜುಗುಪ್ಸೆಯೂ ಉಂಟಾದುವು. ಇದು ನಮ್ಮ ಸಮಾಜದ ನೈಜ ಚಿತ್ರವೇ? ಓರ್ವ ಲಾಯರು ತನ್ನ ಗುಮಾಸ್ತನ ಹೆಂಡತಿಯಲ್ಲಿ ಅನುರಕ್ತನಾಗುವುದು. ಓರ್ವ ವಿಧವೆಯ ಹೆಣ್ಣುಮಗಳು ಗಣಿಕಾವೃತ್ತಿಯನ್ನು ಅವಲಂಬಿಸಿ, ಆನಂತರ ಅವಳು ಒಂದು ಬೆಳಗ್ಗೆ ತನ್ನ ಅಲಂಕಾರ, ರೂಪು, ಯೌವನ ಇವುಗಳನ್ನು ಕನ್ನಡಿಯಲ್ಲಿ ನೋಡಿಕೊಂಡು, ಇವುಗಳಿಂದ ಇಂಥಾ ಜೀವನಯಾತ್ರೆ ಸಾಗಿತೇ ಎಂದು ಯೋಚಿಸಿ ಕಡೆಗೆ ಏನೋ ಜೀವನ ವೃತ್ತಿಯಲ್ಲಿ ತೊಡಗುತ್ತಾಳೆ. ಇದೀಗ ಪ್ರಗತಿ ಉಂಟುಮಾಡುವ ಲೇಖಕರ ಜೀವನಚಿತ್ರದ ವೈಶಿಷ್ಟ್ಯ.

ಮತ್ತೊಂದು 'ಹೊಸಲು ದಾಟಿದ ಹೆಣ್ಣು'. ಇದರಲ್ಲಿ ಓರ್ವ ಯುವಕ ಕೂಲಿಗಾರನ ಜೀವನವನ್ನು ಶ್ರೀಯುತರು ಚಿತ್ರಿಸಿರುವುದು ವರ್ಣನಾತೀತವಾಗಿದೆ. ಬೊಂಬಾಯಿ ಪಟ್ಟಣದಲ್ಲಿ ಕೂಲಿಕಾರರ ಜೀವನವನ್ನು ಶ್ರೀಯುತರು ಬಹು ಆಕರ್ಷಕವಾಗಿಯೂ ನೈಜವಾಗಿಯೂ ಚಿತ್ರಿಸಿದ್ದಾರೆ. ಅವರಲ್ಲಿರುವ ಅಶಿಸ್ತು, ನಿರಾಶೆ ಮುಂತಾದ ಸಂಕೋಲೆಗಳನ್ನು ಕಿತ್ತೊಗೆಯಲು ಪ್ರಯತ್ನಿಸಿದ ಈ ಯುವಕನ ಸಾಹಸವನ್ನು ಶ್ರೀಯುತರು ಚಿತ್ರಿಸಿರುವುದು ಸಮಯಕ್ಕೆ ತಕ್ಕಂತೆ ಸ್ವಾರಸ್ಯವಾಗಿದೆ. ಆದರೆ ಆ ಮಧ್ಯೆ ಓರ್ವ ಕಾಲೇಜು ತರುಣಿಯು ತನ್ನ ಪಾಶವೀದೃಷ್ಟಿಯಿಂದ ಬಡತನದಲ್ಲಿ ಬಳಲುತ್ತಿರುವ ಸಂಸಾರದಲ್ಲಿ, ಅಲ್ಲ ಬಡಗಂಡನಲ್ಲಿ– ತಿರಸ್ಕಾರ ಭಾವದಿಂದ ಸುಖಲೋಲುಪತೆಗೋಸ್ಕರ ಓರ್ವ ಕಾಮಾಂಧನಾದ ಸಾಹುಕಾರನ ಸಹವಾಸವನ್ನು ಮಾಡಿರುವ ಚಿತ್ರವು ಸಮುದ್ರದಲ್ಲಿ ಎಷ್ಟೇ ನೀರಿದ್ದರೂ ಬಾಯಾರಿಕೆಯನ್ನು ತೀರಿಸಿಕೊಳ್ಳಲು ಹೇಗೆ ಸಾಧ್ಯವಿಲ್ಲವೋ ಹಾಗೆ ಕಾದಂಬರಿಯ ಸ್ವರೂಪವನ್ನು ಹಾಳುಮಾಡಿದೆ. ಇದರಿಂದ ಅಸಹ್ಯವುಂಟಾಗುತ್ತದೆ. ಇವರ ಇತರ ಕೆಲವು ಕಾದಂಬರಿಗಳಲ್ಲೂ ಇದೇ ರೀತಿಯ ಚಿತ್ರಗಳು. 'ಕರ್ಮವೀರ'ವು (೧೯೫೨ನೇ ನವಂಬರ್) ತಿಳಿಸಿರುವಂತೆ ಶ್ರೀ ಅ. ನ ಕೃರವರ ಅಧಃಪತನವಾಗಿದೆ. ಸಾಹಿತ್ಯ ಪ್ರಪಂಚದಲ್ಲಿ (ಶನಿಸಂತಾನ, ನಗ್ನಸತ್ಯ.) ಇವುಗಳು ಒಂದಲ್ಲ ಒಂದು ದೃಷ್ಟಿಯಲ್ಲಿ ಕಾಮಕ್ಕೆ ಎಡೆಗೊಟ್ಟವೆಯೇ ಹೊರತು ಉದಾತ್ತವಾದ ಧ್ಯೇಯ, ಜನಜೀವನದ ಸಾರ, ಇವುಗಳನ್ನು ಚಿತ್ರಿಸಿಲ್ಲ. ಪ್ರಗತಿ ಎಂದರೆ Progressive ಎಂಬ ಅರ್ಥವನ್ನು ನಾವು ಇಂಗ್ಲೀಷ್ ಭಾಷೆಯಲ್ಲಿ ತಿಳಿದುಕೊಂಡರೆ ಪ್ರಗತಿಯ ಸ್ವರೂಪವೇನು ಎಂಬುದನ್ನು ಓರ್ವ ವಿಚಾರಪರನು ಹೀಗೆ ಹೇಳಿದ್ದಾನೆ. "If we understand aright we may say perhaps that by the term 'Progressive Writer' is meant one who is responsive to the progressive ideas and aspirations of his age or, in short, one in whose writings are reflected the progressive tendencies ophirage!"* ಈ ಮಾನದಂಡದಿಂದ ಅಳೆದು ನೋಡಿದರೆ ಪ್ರಗತಿಶೀಲಸಾಹಿತಿಗಳ ಕೃತಿಗಳು ಎಷ್ಟು ಸ್ವಚ್ಛವಾಗಿವೆ, ಎಷ್ಟುಮಟ್ಟಿಗೆ ಪ್ರಗತಿಪರವಾಗಿವೆ ಎಂಬುದನ್ನು ನಾವು ತಿಳಿಯಬಹುದು.

ಇನ್ನು ಶೀಲದವಿಚಾರ. ಬರೀ ಕಾಮಪ್ರಚೋದನೆಯೇ ಶೀಲವಾಗುತ್ತದೆಯೇ? ಶೀಲವೆಂದರೆ ನಿಯಮಗಳಿಂದ ಕೂಡಿದ ಎಲ್ಲ ಜಾತಿ ಮತ ದೇಶಕಾಲಗಳವರೂ ಅನುಷ್ಠಾನ ಮಾಡುವ ಜೀವನ. ಇದಕ್ಕೆ ಆಧಾರವಾಗಿ ಇಂದ್ರ – ಪ್ರಹ್ಲಾದರ ಕತೆಯನ್ನು ವಿವರಿಸಿ,

---

* Treveni – Progressive Literature P. 24. (Aug 1947)

ಶೀಲದಿಂದ ಆಗುವ ಉಪಯೋಗವನ್ನು ತಿಳಿಸಿದ್ದಾರೆ * ಇದರ ತತ್ವವನ್ನು ನಾವು ಪ್ರಗತಿ ಶೀಲ ಸಾಹಿತಿಗಳಲ್ಲಿ ಕಾಣುತ್ತೇವೆಯೇ? ಇನೆಯ ಘೋರ ಯುದ್ಧದಲ್ಲಿ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ಅಸಹಕಾರ ಚಳುವಳಿ– 'ಮಾಡು ಅಥವಾ ಮಡಿ' ಎಂಬ ಧ್ಯೇಯವನ್ನು ಹೂಡಿತು. ಆಗ ಸಾಮ್ರಾಜ್ಯಶಾಹಿ ಸರ್ಕಾರವು ಭಾರತದ ರಕ್ಷಣೆಗಾಗಿ National Defence Council ಎಂಬ ಒಂದು ಸಂಸ್ಥೆಯನ್ನು ಸ್ಥಾಪಿಸಿತು. ಆ ಸಂಸ್ಥೆಯ ವಿಚಾರವಾಗಿ ಪಂಡಿತ ನೆಹ್ರೂರವರು It is neither National nor defensive ಎಂದು ಹೇಳಿದರು. ಈಗ ಅದೇ ಮಾತನ್ನು ಅದಲು ಬದಲು ಮಾಡಿ ಇವರ ವಿಚಾರವಾಗಿ ಹೇಳಿದರೆ ಅದೇನೂ ಸತ್ಯಕ್ಕೆ ದೂರವಾಗಿರಲಾರದು. "It is neither Progressive nor it has any literary merit."

ಇದರಂತೆಯೇ ಅರ್ಚಿಕ ವೆಂಕಟೇಶರ 'ಅಸ್ಥಿ ಪಂಜರ"ವೆಂಬ ಕಾದಂಬರಿ. ಕಾರ್ಲ್‌ಮಾರ್ಕ್ಸ್‌ರ ಸಿದ್ಧಾಂತಗಳ ಅಧ್ಯಯನದಿಂದ ಮನಸ್ಸಿಗೆ ಕಾವು ಏರಿ ಕಾದಂಬರಿಗಾರರು ಸಮಾಜದಲ್ಲಿ ಅದರ ತತ್ವವನ್ನು ಅನುಷ್ಠಾನಕ್ಕೆ ತರುವ ರಭಸದಲ್ಲಿ ಜೀವನಕ್ಕೆ ಬೇಕಾದ ಅನ್ನ–ನೀರು ಕಾಣದೆ ಅಸ್ಥಿಪಂಜರವಾಗುತ್ತಾರೆ. ಇದೀಗ ಕಾದಂಬರಿಯ ಸಾಮಾನ್ಯ ಚಿತ್ರ. ಈ ಮಧ್ಯೆ ಆತ್ಮಶ್ಲಾಘನೆಗೆ ಎಡೆಕೊಟ್ಟು ಉದ್ದಾಮ ಸಾಹಿತಿಗಳೆಂದೂ ಪ್ರತಿಭಾಶಾಲಿಗಳೆಂದೂ ಹೇಳಿಕೊಂಡು ತಮಗೆ ಬರೀ ಸರಸ್ವತಿಯವರ ಪ್ರಸಾದವಾಯಿತೆಂದು, ಲಕ್ಷ್ಮಿ–ಸರಸ್ವತೀದೇವಿಯರು ಒಲಿದು ನಲಿದಾಡುತ್ತಿರುವವರನ್ನು ನೋಡಿ ಕರುಬುತ್ತಾರೆ. ಇದು ಸಾಹಿತಿಗಳ ಲಕ್ಷಣವೇ? ಸಾಹಿತ್ಯದ ಗುಣಗಳಿವೆಯೇ? ಇದನ್ನು ವಿಮರ್ಶಕರು ಆಲೋಚಿಸಬೇಕು ವಿವೇಚನೆಯಿಂದ.

ಒಟ್ಟಿನಲ್ಲಿ ಪ್ರಗತಿಯಿಲ್ಲ, ಶೀಲವಿಲ್ಲ, ಸಾಹಿತ್ಯದ ಗುಣವಿಲ್ಲ. ಪ್ರಗತಿಶೀಲದ ಹೆಸರಿನಲ್ಲಿ ಬರದದ್ದೆಲ್ಲಾ ಅಚ್ಚಾಗಿದ್ದ ಮಾತ್ರಕ್ಕೆ ಅದು ಸಾಹಿತ್ಯವಾಗಲಾರದು. ಮ್ಯಾಗ್ಜಿಂಗಾರ್ಕಿಯವರ ಜೀವನದ ಜೀವಾಳವನ್ನು ಕನ್ನಡಿಗರಿಗೆ ಚಿತ್ರಣ ಮಾಡಿಕೊಟ್ಟವರು, ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಆಳವಾಗಿ ಅಭ್ಯಾಸ ಮಾಡಿ ಕನ್ನಡಿಗರಿಗೆ ಆ ಸಾಹಿತ್ಯವನ್ನು ಅಚ್ಚುಮೆಚ್ಚಾಗುವಂತೆ ಚಿತ್ರಿಸಿದವರು, ಈಚೆಗೆ ಈ ಪ್ರತ್ಯಕ್ಷವಾದೀ ಎಂಬ ಪರದೆಯ ಮರೆಯಲ್ಲಿ (ನಗ್ನಸತ್ಯ) Realistic view of life - ಅಶ್ಲೀಲ, ಅಸಭ್ಯ ಸಾಹಿತ್ಯವನ್ನು ಸೃಷ್ಟಿಮಾಡಲು ಹೊರಟಿರುವುದು ತುಂಬ ಶೋಚನೀಯವಾದ ಸಂಗತಿ. ಮತ್ತು ಕನ್ನಡಿಗರ ದೌರ್ಭಾಗ್ಯ. ಸಾಹಿತ್ಯದ ವಿಚಾರವಾಗಿ ಶ್ರೀಯುತರೇ ತಮ್ಮ ವೀರಶೈವ ಸಾಹಿತ್ಯದಲ್ಲಿ ಮತ್ತು ಧರ್ಮದ ವಿಚಾರವಾಗಿ ಹೇಳಿರುವ ಮಾತನ್ನು ಅವರೇ ಮನನ ಮಾಡಿಕೊಂಡರೆ ಒಳ್ಳೆತು. ಇದೀಗ ಅವರಮಾತು "ಮಾನವ ಸಂಸ್ಕೃತಿಯನ್ನು ಉಚ್ಚಗೊಳಿಸಿ, ಮಾನವನನ್ನು ಉನ್ನತವಿಹಾರ ಮತ್ತು ಉತ್ತಮ ವಿಚಾರಗಳಲ್ಲಿ ಲೀನನನ್ನಾಗಿ ಮಾಡುವುದೇ ಸಾಹಿತ್ಯದ ಗುರಿಯ........ಉಚ್ಚ ಆಚಾರದ ಪ್ರತೀಕವಾದ ಉಚ್ಚವಿಚಾರವನ್ನೂ ಸಾಹಿತ್ಯ ಒಳಗೊಂಡಿದೆ ಎನ್ನುವ ತತ್ವದ ಬದಲು, ಉಚ್ಚ ಆಚಾರ ವಿಚಾರಗಳಿಲ್ಲದಿದ್ದಲ್ಲಿ ಉತ್ತಮ ಸಾಹಿತ್ಯವಾಗುವುದೇ ಇಲ್ಲವೆಂದು ಖಂಡಿತವಾಗಿ ಸಾರಿದ ಕೀರ್ತಿ ವೀರಶೈವ ಸಾಹಿತ್ಯದ್ದು." * ಇಂತಹ ಆಣಿಮುತ್ತಿನಂಥ ಮಾತನ್ನು ಸಾಹಿತ್ಯ ಮತ್ತು ಸಾಹಿತ್ಯದ ಗುರಿಯ ವಿಚಾರವಾಗಿ ಆಡಿರುವ ಶ್ರೀ ಅ.ನ.ಕೃ.ರವರು ಅದೇಕೆ ಅವುಗಳನ್ನು ತಮ್ಮ ಕೃತಿಗಳಲ್ಲಿ–ಒಂದೆರಡನ್ನುಬಿಟ್ಟು–ಗಾಳಿಗೆ ತೂರಿಬಿಟ್ಟರೋ ಅವರೇ ಹೇಳಬೇಕು!

ಸಾರಾಂಶ, ಜನ ಜೀವನವನ್ನು ಇದ್ದಹಾಗೆಯೇ ತಿಳಿಸುತ್ತೇವೆ ಎಂಬುದು ಬರೀ ಬೂಟಾಟಿಕೆ. ಮಾನವನು ವಿಚಾರಪರ. ಅವನಿಗೆ ವಿವೇಚನಾಶಕ್ತಿ ಇಲ್ಲದಿದ್ದರೆ ಅವನು ಪಶುವಾಗುತ್ತಾನೆ. ಪಶುವಿಗೂ ಅವನಿಗೂ ಅಂತರ ಇಷ್ಟೇ. 'ಸಹಿತ' ಎನ್ನುವುದು 'ಸಾಹಿತ್ಯ' ಪದದ ಮೂಲ. ಆದ್ದರಿಂದ ಸಾಹಿತ್ಯವೆಂದರೆ ಒಂದರ ಜೊತೆಯಲ್ಲಿರುವುದು. ಅದು ನಿಸರ್ಗವಾಗಬಹುದು, ಸಮಾಜವಾಗಬಹುದು. ಸಾಹಿತ್ಯ– Sahitya or Union with the universe to want to combine the ending day, gloriously lit by the setting sun at the river's side, with his mind and soul. (Tagore's Hnmanistic concept of Literature – Trivani Aug. 47). ಇವುಗಳನ್ನು ಬಿಟ್ಟು ಸಾಹಿತಿಯು ತಾನೆ ಎಲ್ಲಿಗೆ ಹೋದಾನು?

* ವಚನ ಭಾರತ. ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳಿಂದ– ಪುಟ ೩೮ – ಪೀಠಿಕೆ.

* ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ. (Part I).

ಶ್ರೀ ಮಾಸ್ತಿಯವರು ಹೇಳಿರುವಂತೆ ಸಮಾಜವು ಎಲ್ಲ ಭೂಮಿಗಳಂತೆ ಆದರೆ ಸಾಹಿತಿಯು ಆ ಸಮಾಜದ ಹಿಮವತ್ಪರ್ವತದಂತೆ. ಅವನೂ ಭೂಮಿಯನ್ನು ಬಿಟ್ಟಿರಲಾರ, ಬಿಡುವುದಕ್ಕೆ ಆಗುವುದೂ ಇಲ್ಲ. ಹೀಗೆಂದ ಮಾತ್ರಕ್ಕೆ ಸಮಾಜದಲ್ಲಿ ವಿಟರು, ನಟರು ಇಲ್ಲವೇ? ಅವರ ಒಂದು ಚಿತ್ರ ಬೇಡವೇ? ಎಂದು ಪ್ರಶ್ನಿಸಬಹುದು. ಆದರೆ ಇಷ್ಟೇ ಸಾಹಿತ್ಯವಾದರೆ ಸಾಹಿತ್ಯದ ಸಫಲತೆ ಏನು? ಆದರ್ಶವೇನು? ಅದರ ಗುರಿಯೇನು? ಇವುಗಳೆಲ್ಲವನ್ನೂ ನಾವು ಮೂಲೆಗೊತ್ತಬೇಕೇ? ಹಾಗಾದರೆ ಸಮಾಜದ ಆದರ್ಶವು 'ಆಹಾರ, ನಿದ್ರಾ, ಭಯ, . . . .'ಮಾತ್ರವೇ? ಇದು ಎಂದಿಗೂ ಆಗಲಾರದು, ಆಗಬಾರದು.

---




# ನಾಳಕ ಸೂತ್ರ

## (ವಸ್ತುಗಾಥಾ)

(ಮೂಲಪಾಳಿಯಿಂದ ಅನುವಾದ ಮಾಡಿದೆ)

ಶ್ರೀ ಎಸ್. ಕೆ. ರಾಮಚಂದ್ರರಾವ್, ಎಂ.ಎ.

೧

ಆನಂದ ತುಂಬಿ ದೇವಗಣ ನಲಿಯುತಿರೆ
ಇಂದ್ರ ಶಕ್ರ ಮುಂತಾಗಿ ಮೂವತ್ತು ಮಂದಿ,
ದುಪ್ಪಟೆ ಎಸೆದೆಸೆದು ಮೈಮರೆಯುತಿರೆ
ಅದನು ಕಂಡ ನಡುಹಗಲಲಿ ಅಸಿತ ಋಷಿ

೨

ಇಂತು ಸಂತೋಷದಲಿ ಸಂಭ್ರಮದಲಿ ಮಿಗೆ
ನಲಿಯುತಿಹ ದೇವತೆಗಳ ನೋಡಿ ಋಷಿ–
"ದೇವಗಣಕೆ ಈ ಸಂಭ್ರಮ ಏನು?
ದುಪ್ಪಟೆ ಎಸೆದಾಡಿ ಮೈಮರೆತಿಹರು ಏನು?

೩

ಅಸುರ ದೇವರ ಸಂಗರವಾದಂದು
ಅಸುರರು ಅಳಿದು ದೇವಗಣ ಗೆದ್ದಂದು ಕೂಡ
ಈ ಸಂಭ್ರಮ ಇರಲಿಲ್ಲ, ಈ ರೋಮ ಹರ್ಷಣ!
ಈಗೇನು ಅದ್ಭುತಕಂಡು ನಲಿಯುವರು ಹೀಗೆ?

೪

ಕೂಗುವರು ಹಾಡುವರು ವಾದ್ಯನುಡಿಸುವರು,
ಭುಜಗಳ ತಟ್ಟಿ ಕುಣಿಕುಣಿಯುತಿಹರು!
ಅದುವೆ ಕೇಳುವೆ, ಓ ಮೇರುವಾಸಿಗಳೇ,
ನನ್ನ ಸಂಶಯ ಹರಿಸಿರಿ ಬೇಗ, ಮಾರಿಷರೇ!"

೫

"ಬೆಲೆಕಟ್ಟಲು ಬಾರದ ವರರತ್ನ ಬೋಧಿಸತ್ತ್ವ
ಮನುಷ್ಯರ ನಡುವೆ ಅವರ ಹಿತಸುಖಕೆಂದು
ಲುಂಬಿಣಿಯಲಿ ಹುಟ್ಟಿಹನು ಶಾಕ್ಯಜನಪದದಲಿ,
ಅದುವೆ ನಮಗೆಲ್ಲ ಅತಿ ತೃಪ್ತಿ, ಆನಂದದೋಲಾಟ!

೬

ಎಲ್ಲ ಸತ್ತ್ವರಲಿ ಮಿಗಿಲವನು ಅಗ್ರಪುದ್ಗಲನು
ಮನುಷ್ಯರಲಿ ಶ್ರೇಷ್ಠ, ಬದುಕಿಹರಲೆಲ್ಲ ಉತ್ತಮನು
ಋಷಿಪತನದಲಿ ತಿರುಗಿಸುವನು ಚಕ್ರವನು
ಸಿಂಹ ಮೃಗರಾಜ ಬಲವಂತ ಗರ್ಜಿಸುವವೊಲು!"

೭

ಅದು ಕೇಳಿ ತ್ವರೆಯಿಂದ ಇಳಿದನಾಗ
ಶುದ್ಧೋದನನ ಮನೆಗೆ ಸಂದ ಋಷಿ.
ಬಂದಲ್ಲಿ ಶಾಕ್ಯರನು ನೋಡಿ ಎಂದ–
"ಮಗು ಎಲ್ಲಿ? ನೋಡಬಯಸುವೆನು"

೮

ತೋರಿದರು ಶಾಕ್ಯರು ಅಸಿತಮುನಿಗಾಗ,
ಪುಟಕಿಟ್ಟ ಬಂಗಾರದಪರಂಜಿಯಂತೆ,
ಮಿರುಮಿರುಗುವವನನು ಸಿರಿಯಿಂದ
ಜ್ವಲಿಸುತಿಹ ಮಗುವನು ಪ್ರಭೆಯಂತೆ,

೯

ನಭ ಏರಿ ಸಾಗುವ ಚಂದ್ರನೊಲು ಶುದ್ಧ,
ನಿರ್ಮೇಘಶರದಾಗಸದ ಸೂರ್ಯಸಮ,
ಜ್ವಾಲೆಯೊಳು ಬೆಳಗುವ ಶಿಶುವನು ಕಂಡು
ಮನದಲಿ ಹೊಂದಿದನು ಮುನಿ ಅತಿ ಆನಂದ.

೧೦

ಅನೇಕಶಾಖೆಗಳು, ಸಹಸ್ರಮಂಡಲವು,
ಆಕಾಶದಲಿ ಎದ್ದು ಛತ್ರ ನಿಂತಿತ್ತು,
ಬೀಸುತಿವೆ ಸುವರ್ಣದಂಡದ ಚಾಮರಗಣ,
ಛತ್ರಚಾಮರ ಹಿಡಿದವರು ಮಾತ್ರ ಕಾಣರಲ್ಲ !

೧೧

ಪಂಡುಕಂಬಲದಲಿ ಸುವರ್ಣ ಇಟ್ಟಂತೆ,
ತಲೆಯ ಮೇಲ್ಬಿಳಿಛತ್ರ ಮೆರೆಯೆ,
ತುಂಬುದೇಹದ ತಾಪಸ ಅಸಿತಋಷಿ
ಮಗುವನು ಕೈಗೆ ಕೊಂಡ ಸುಮನ.

೧೨

ಶಾಕ್ಯಪುಂಗವನಾದ ಶಿಶುವನೆತ್ತಿ
ಲಕ್ಷಣಮಂತ್ರಪಾರಗನಾದ ಮುನಿ
ಹೀಗೆಂದ ಪ್ರಸನ್ನಚಿತ್ತನಾಗಿ–
“ ಅನುತ್ತರ, ಇವನು, ಮನುಷ್ಯರಲೆಲ್ಲ
ಉತ್ತಮನು !”

೧೩

ತನ್ನ ಸಾವಿನ ಸಮೀಪ ನೆನೆದಾಗ
ಬಳಬಳನೆ ಕಣ್ಣೀರು ತಾಳಿದ ಋಷಿ.
ಇದು ಕಂಡು ಬೆದರಿದರು ಶಾಕ್ಯರು–
“ ಮಗುವಿಗೆ ಗಂಡವಿರದಷ್ಟೆ ? ”

೧೪

ಆ ಶಾಕ್ಯರನು ಕುರಿತೆಂದ ಅಸಿತ–
“ ಮಗುವಿಗೆ ಕಾಣೆನೇನೂ ಅಹಿತ,
ಎಂದೂ ಇರದು ಗಂಡವೇನೂ,
ಹೌಹಾರಿ ಹೆದರದಿರಿ ಬರಿದು.

೧೫

ಈ ಮಗು ಮುಟ್ಟುವನು ಸಂಬೋಧಿಕೊನೆ,
ವಿಶುದ್ಧಿಯನು ಕಂಡವನೆ ಬಹುಜನದ ಹಿತ–
ಬಯಸಿ ಹರಿಸುವನು ಧರ್ಮಚಕ್ರವನು,
ಬೆಳೆಯುವುದು ಎಲ್ಲೆಲ್ಲೂ ಬ್ರಹ್ಮಚರ್ಯ !

೧೬

ಬಹುವಾಗಿ ಉಳಿದಿಲ್ಲವೆನ್ನ ಆಯುಷ್ಯ,
ಕ್ಷಿಪ್ರದಲೆ ಸಂದುವೆನು ಯಮಸದನ ;
ಈ ಉತ್ತಮನ ಧರ್ಮವನು ಕೇಳಲಾರೆ
ಅದಕಾಗಿ ಮರುಗುವೆನು ಇಂತು ! ”

೧೭

ಎಂದು ಶಾಕ್ಯರಿಗೆ ಅತಿಯಾಗಿ ಸುಖ ಬೆಳಸಿ
ಅಸಿತ ಮುನಿ ಹೊರಟನಂತಃಪುರದಿಂದ ;
ತನ್ನಯಾ ಸೋದರಳಿಯನನು ಕರೆದಾಗ
ಅವನ ಹಿತಕಾಗಿ ಬಯಸಿ ಇಂತೆಂದ–

೧೮

“ ಸಂಬೋಧಿಮುಟ್ಟಿ ಧರ್ಮಮಾರ್ಗದಲಿ ಬುದ್ಧ
ಸಾಗುವವನೆಂಬ ವಾರ್ತೆ ಕೇಳುವೆಯೆಂದು,
ಅಂದು ಅವನನು ಅರಸುತ್ತ ಸಂದು
ಆ ಭಗವಂತನಲೆ ನಡೆಸು ಬ್ರಹ್ಮಚರ್ಯವನು ”.*

[ *ಇದು ಪಾಳಿಭಾಷೆಯ ಸುತ್ತನಿಪಾತ ಎಂಬ ಬೌದ್ಧಗ್ರಂಥವೊಂದರಲ್ಲಿದೆ. ಸಂದರ್ಭ—ಬುದ್ಧದೇವನ ಜನನ. ಅಸಿತನೆಂಬುವನು ಸರ್ವಧಾರಪರ್ವತದ ವಾಸಿಯಾದ ಒಬ್ಬ ಮುನಿ, ಕಾಲಜ್ಞ. :ನಾಳಕ ಅವನ ಸೋದರಳಿಯ, ಮುಂದೆ ಬುದ್ಧಭಗವಾನನ ಶಿಷ್ಯನಾಗುತ್ತಾನೆ.]

# ‘ಕಿಲುಂಬುಗೊಂಡಿರ್ದ ದೆಸೆಯೊಳ್ ಇರ್ದುದು’—ಯಾವುದು?

ಶ್ರೀ ಕಯ್ಯಾರ ಕಿಞ್ಞಣ್ಣರೈ, ವಿದ್ವಾನ್.

ಕವಿ ಚಕ್ರವರ್ತಿ ರನ್ನಕವಿ ವಿರಚಿತವಾದ ಗದಾಯುದ್ಧ ಕಾವ್ಯದ ನವಮಾಶ್ವಾಸದಲ್ಲಿ ಹತ್ತನೆಯ ಪದ್ಯ ಇಂತಿದೆ:

"ಮಲಿನರನೆ ಪೊರ್ದುವಯ್ ನಿ
ರ್ಮಲರತ್ತಲ್ ಪೊರ್ದಲೊಲ್ಲೆ ನೀಂ ಕನ್ನಡಿಯೊಳ್
ಜಲಮಿರ್ಪ ದೆಸೆಯೊಳಿರ್ದಾ
ಕಿಲುಂಬು ಗೊಂಡಿರ್ದ ದೆಸೆಯೊಳಿರ್ದುದೆ ಪೇಳ್ಗಂ"

ಮೇಲಿನ ಪದ್ಯದ ಸಂದರ್ಭವಿದು:

ಭೀಮದುರ್ಯೋಧನರೊಳಗೆ ಗದಾಯುದ್ಧವಾಗಿ, ಭೀಮಸೇನನು ದುರ್ಯೋಧನನ ಊರುಭಂಗ ಕಿರೀಟ ಭಂಗಗಳನ್ನು ಮಾಡಿದನು. ದುರ್ಯೋಧನನು ರಣರಂಗದಲ್ಲಿ ಕೆಡೆದಿದ್ದನು. ಆತನ ಜೀವವಿನ್ನೂ ಹೋಗಿರಲಿಲ್ಲ. ಗಾಂಗೇಯನಿಂದೀ ವೃತ್ತಾಂತವನ್ನು ತಿಳಿದು ಅಶ್ವತ್ಥಾಮನು ಮುಳಿದು ದುರ್ಯೋಧನನಿದ್ದಲ್ಲಿಗೆ ಬಂದನು. ಆ ಸಂದರ್ಭದಲ್ಲಿ ಲಕ್ಷ್ಮಿಯು ‘ನಾರಾಯಣಂ ಬೆಸಸೆ ಪೋದಪೆ’ನೆಂದು ದುರ್ಯೋಧನನಲ್ಲಿಂದ ಹೊರಟು ಹೋಗಲನುವಾಗಿದ್ದಳು. ಅದೆಲ್ಲವನ್ನೂ ಕಂಡು ಕುಪಿತನಾದ ಅಶ್ವತ್ಥಾಮನು ಆಕೆಯನ್ನು ತಡೆದು ಹಲವು ರೀತಿಗಳಲ್ಲಿ ಲಕ್ಷ್ಮೀವಿಡಂಬನೆ ಮಾಡುವನು. ಅಶ್ವತ್ಥಾಮನು ಹೀಗೆ ನಾನಾ ವಿಧದಲ್ಲಿ ಲಕ್ಷ್ಮಿಯನ್ನು ನಿಂದಿಸುವ ಸಂದರ್ಭದ ಪದ್ಯವಿದು.

ಮೇಲಿನ ಪದ್ಯದ ಪೂರ್ವಾರ್ಧದ ಪದ್ಯವು ಅತ್ಯಂತ ಸ್ಪಷ್ಟವಾಗಿದೆ: "ಲಕ್ಷ್ಮಿಯೆ. ನೀನು ಮಲಿನರಾದವರನ್ನೇ ಹೊಂದುತ್ತಿ; ನಿರ್ಮಲರನ್ನು ಹೊಂದಿಕೊಳ್ಳುವುದಿಲ್ಲ" ಎಂಬುದು ಪೂರ್ವಾರ್ಧದ ಅರ್ಥ. ಅದು ಲಕ್ಷ್ಮಿಯ ಕುರಿತು ಅಶ್ವತ್ಥಾಮನ ಆರೋಪವಾಗಿದೆ.

ಪೂರ್ವಾರ್ಧದಲ್ಲಿ ಮಾಡಿದ ಆರೋಪವನ್ನು ಉತ್ತರಾರ್ಧದಲ್ಲಿ ಉದಾಹರಣೆಯಿಂದ ಸಮರ್ಥಿಸುವುದಾಗಿದೆ. ಉತ್ತರಾರ್ಧದ ಅನ್ವಯ ಹೀಗೆ ಮಾಡಬಹುದು:

"ನೀಂ, ಕನ್ನಡಿಯೊಳ್ ಜಲಮಿರ್ಪ ದೆಸೆಯೊಳಿರ್ದಾ
ಕಿಲುಂಬುಗೊಂಡಿರ್ದ ದೆಸೆಯೊಳಿರ್ದುದೆ ಪೇಳ್ಗಂ"

ಮೇಲಿನ ಅನ್ವಯಪ್ರಕಾರ, ಲಕ್ಷ್ಮಿಯು ಕನ್ನಡಿಯಲ್ಲಿ ಜಲವಿರುವ ಜಾಗದಲ್ಲಿ ಇದ್ದು, ಕಿಲುಬುಹಿಡಿದ ಜಾಗದಲ್ಲಿರುವುದೇ, ಆಕೆ ಮಲಿನರನ್ನು ಹೊಂದುವುದಕ್ಕೂ ನಿರ್ಮಲರನ್ನು ಹೊಂದದಿರುವುದಕ್ಕೂ ಸಮರ್ಥನೆಯಾಗಿರುವುದು.

ಇಲ್ಲಿ ಕೆಲವು ಆಕಾಂಕ್ಷೆಗಳು ಉಂಟಾಗುತ್ತವೆ:

೧. ಲಕ್ಷ್ಮಿ ಕನ್ನಡಿಯಲ್ಲಿ ಇರುವಳೆಂದರೆ ಹೇಗೆ?

೨. ಲಕ್ಷ್ಮಿ ಕನ್ನಡಿಯಲಿ ಜಲವಿರುವಲ್ಲಿರುವಳೆಂದರೇನು?

೩. ಕಿಲುಬು ಹಿಡಿದಲ್ಲಿ ಲಕ್ಷ್ಮಿ ಇರುವಳೆಂಬುದು ಹೇಗೆ?

೪. ಲಕ್ಷ್ಮಿಯು ಜಲವಿರುವ ಜಾಗದಲ್ಲಿದ್ದು ಕಿಲುಬ ಹಿಡಿದ ಜಾಗದಲ್ಲಿಯೂ ಇರುವಳೆಂದರೆ ಒಳ್ಳೆಯ ಸ್ಥಳದಲ್ಲಿ ಕೆಟ್ಟಸ್ಥಳದಲ್ಲಿಯೂ ಇರುತ್ತಾಳೆಂದು ಹೇಳಿದಂತೆ ಆಗಲಿಲ್ಲವೆ? ಹಾಗಾದರೆ ಉತ್ತರಾರ್ಧವು ಪೂರ್ವಾರ್ಧದ ಸಮರ್ಥನೆ ಹೇಗಾಗುವುದು?

ಕೆಲವರು, ಕನ್ನಡಿಯೆಂದರೆ, ಈಗ ನಾವು ಉಪಯೋಗಿಸುತ್ತಿರುವ ಗಾಜಿನ ಕನ್ನಡಿಯೆಂದು ಅರ್ಥ ಮಾಡುತ್ತಾರೆ. ಆದರೆ ರನ್ನ ಮಹಾಕವಿಯ ಕಾಲದಲ್ಲಿ, ಎಂದರೆ ಇಂದಿಗೆ ಸಾವಿರ ವರ್ಷಗಳ ಹಿಂದೆ ಗಾಜಿನ ಕನ್ನಡಿಯು ಇರಲಿಲ್ಲವಷ್ಟೆ? ಹಾಗಾಗಿ, ಕನ್ನಡಿಯೆಂದರೆ ಗಾಜಿನ ಕನ್ನಡಿ ಖಂಡಿತ ಅಲ್ಲವೆಂಬುದು ಸ್ಪಷ್ಟವೇ ಆಗಿದೆ.

ಹಾಗಾದರೆ ಇಲ್ಲಿ ಹೇಳಿದ ಕನ್ನಡಿ ಯಾವುದು?

ಹಿಂದಿನ ಕಾಲದಲ್ಲಿ, ಕಂಚಿನ ಕನ್ನಡಿಯನ್ನು ಉಪಯೋಗಿಸುತ್ತಿದ್ದರೆಂದು ಕಾವ್ಯಗಳಲ್ಲಿಯೂ ಅನೇಕ ಕಡೆ ವರ್ಣನೆ ಇದೆ. ಇಂದಿಗೂ ಕೆಲವು ಕಡೆ ಇಂತಹ ಕನ್ನಡಿಗಳನ್ನು ನಾವು ಕಾಣಬಹುದು. ಚನ್ನಾಗಿ ತಿಕ್ಕಿದ ಕಂಚಿನ ಪಾತ್ರದಲ್ಲಿ ಮುಖ ಕಾಣಿಸುತ್ತದೆ. ಹಿಂದಿನವರು ‘ದರ್ಪಣ’ ‘ಮುಕುರ’ ಮೊದಲಾಗಿ ಹೇಳುತ್ತಿದ್ದುದು ಅಂತಹ ಕನ್ನಡಿಗೇ ಆಗಿದೆ. ಅಂತಹ ಕಂಚಿನ ಕನ್ನಡಿಗೆ ತಿಕ್ಕದೆ ತೊಳೆಯದೆ ಇದ್ದರೆ ಕಿಲುಬು ಹಿಡಿಯು

ವುದೂ ಸಹಜವೇ ಆಗಿರುವುದು. ಆದ್ದರಿಂದ ಈ ಪದ್ಯದಲ್ಲಿ ಹೇಳಿದ ಕನ್ನಡಿಯೆಂದರೆ ಗಾಜಿನ ಕನ್ನಡಿ ಸರ್ವಥಾ ಅಲ್ಲ; ಕಂಚಿನ ಕನ್ನಡಿಯೆಂಬುದು ನಿರ್ವಿವಾದ.

ಅಂತೂ, ಲಕ್ಷ್ಮಿ ಕನ್ನಡಿಯಲ್ಲಿ ಇರುತ್ತಾಳೆಯೆ?

ಲಕ್ಷ್ಮಿ ಸಮುದ್ರದಲ್ಲಿ ಹುಟ್ಟಿದವಳು, ಕಮಲದಲ್ಲಿ ಉದ್ಭವಿಸಿದವಳು ಹೀಗೆಂದು ಕಥೆಗಳಿವೆ. ಆಕೆ ಕನ್ನಡಿಯಲ್ಲಿ ಇರುತ್ತಾಳೆಂಬುದನ್ನು ಯಾವ ರೀತಿ ಹೊಂದಿಕೆ ಮಾಡಬಹುದು? ಕನ್ನಡಿ ಸೌಭಾಗ್ಯಕರ, ಶ್ರೀಕರವೆಂಬ ಪ್ರತೀತಿಯಿದೆ. ಬೆಳಗ್ಗೆ ಎದ್ದು ಕನ್ನಡಿ ನೋಡುವುದು ಶುಭದರ್ಶನವೆಂದು ವರ್ಣನೆಗಳಿವೆ. ಹಾಗಾಗಿ ಕನ್ನಡಿಯಲ್ಲಿ ಲಕ್ಷ್ಮಿ ಇರುತ್ತಾಳೆಂದು ಅರ್ಥಹೊಂದಿಕೆ ಮಾಡಬಹುದೆಂದು ತೋರುತ್ತದೆ. ಅಲ್ಲದೆ ಬೇರೆ ಹಾದಿ ತೋರುವುದಿಲ್ಲ. ಹೀಗೆ ಕನ್ನಡಿಯಲ್ಲಿ ಲಕ್ಷ್ಮಿ ಇರುತ್ತಾಳೆಂದು ಅರ್ಥ ಕಲ್ಪಿಸಿಕೊಂಡರೂ ಮುಂದಿನ ಮಾತುಗಳ ಅರ್ಥ ವೇನು?

ಕಂಚಿನ ಕನ್ನಡಿಯಲ್ಲಿ ಜಲ–ಎಂದರೆ ನೀರು ಇರಬಹುದು; ಕಿಲುಬೂ ಇರಬಹುದು. ಆದರೆ ಜಲವಿರುವಲ್ಲಿಯೂ ಕಿಲುಬುಹಿಡಿದಲ್ಲಿಯೂ ಲಕ್ಷ್ಮಿ ಇರುತ್ತಾಳೆಂಬುದರ ವಿವರಣೆ ಹೇಗೆ? ಅಥವಾ ಜಲ ಇದ್ದಲ್ಲಿಯೂ ಲಕ್ಷ್ಮಿ ಇದ್ದಾಳೆ, ಕಿಲುಬು ಹಿಡಿದಲ್ಲಿಯೂ ಇದ್ದಾಳೆಂದರೆ ಮಲಿನರನ್ನು ಹೊಂದಿ, ನಿರ್ಮಲರನ್ನು ಹೊಂದುವುದಿಲ್ಲವೆಂದು ಹೇಳಿದುದರ ಸಮರ್ಥನೆ ಹೇಗಾಯಿತು?

ಜಲವೆನ್ನುವುದಕ್ಕೆ ನೀರು ಎನ್ನುವ ಅರ್ಥ ಮಾಡುವ ಬದಲು, ಜಳ ಎಂದರೆ ಹೊಳಪು ಎಂದು ತುಸು ತಿದ್ದಿ ಅರ್ಥಮಾಡಿದರೆ ಅರ್ಥಕ್ಕೆ ಸ್ವಲ್ಪ ಸುಲಭ ಆಗಬಹುದೆ? ಹೊಳಪು ಇದ್ದಲ್ಲಿ ನೀನಿರುತ್ತಿ: ಕೊಳಕು (ಕಿಲುಬು) ಇದ್ದಲ್ಲಿಯೂ ಇರುತ್ತೀ ಎಂದು ಹೇಳುವಲ್ಲಿ ಅರ್ಥದ ಸಾಮೀಪ್ಯತೆ ತೋರುತ್ತದೆ. ಆದರೂ ಉತ್ತರಾರ್ಧ ಮತ್ತು ಪೂರ್ವಾರ್ಧಗಳ ಹೊಂದಿಕೆ ಸರಿಗೂಡುವುದಿಲ್ಲ.

ಒಂದುತಿದ್ದು ಪಡಿಗೆ ಕೈಹಾಕಿದಮೇಲೆ ಇನ್ನೊಂದು ತಿದ್ದುಪಡಿಗೂ ಕೈಹಾಕೋಣವೇ ಎನ್ನಿಸುತ್ತದೆ; ಅದು ಹೀಗೆ:—

ಜಳವಿರ್ಪದೆಸೆಯೊಳಿರ್ದಾ—ಎಂಬುದನ್ನು

ಜಳವಿರ್ಪದೆಸೆಯೊಳಿರದಾ—ಎಂದು ತಿದ್ದಿದರೆ ಆದೀತೆ?

ಮೇಲಿನ ತಿದ್ದುಪಡಿಗಳ ಪ್ರಕಾರ ಪದ್ಯ ಹೀಗಾಯಿತು.

> "ಮಲಿನರನೆ ಪೊರ್ದುವಯ್ ನಿ
> ರ್ಮಲರತ್ತಲ್ ಪೊರ್ದಲೊಲ್ಲೆ ನೀಂ ಕನ್ನಡಿಯೊಳ್
> ಜಳವಿರ್ಪದೆಸೆಯೊಳಿರದಾ
> ಕಿಲುಂಬು ಗೊಂಡಿರ್ದ ದೆಸೆಯೊಳಿರ್ದುದೆ ಪೇಳ್ಗುಂ"

ಈಗ ಪೂರ್ವಾರ್ಧ ಉತ್ತರಾರ್ಧಗಳ ಸಮರ್ಥನೆ ಸರಿಯಾಗಬಹುದು.

"ನೀನು ನಿರ್ಮಲರಲ್ಲಿರುವುದಿಲ್ಲ; ಮಲಿನರಲ್ಲಿ ಇರುತ್ತಿ" ಎಂಬುದಕ್ಕೆ ಸಮರ್ಥನೆ

"ಕನ್ನಡಿಯಲ್ಲಿ ನೀನು ಹೊಳಪು ಇದ್ದಲ್ಲಿ ಇರುವುದಿಲ್ಲ; ಕಿಲುಬು ಇದ್ದಲ್ಲಿ ಇರುತ್ತಿ" ಈಗ ಸಾಮಾನ್ಯತಃ ಅರ್ಥದ ಹೊಂದಿಕೆ ಆಗುವುದು. ಆದರೆ, ಇದರಲ್ಲಿಯೂ ಆಕಾಂಕ್ಷೆ ಉಳಿಯುತ್ತದೆ.

ಕನ್ನಡಿ ಸೌಭಾಗ್ಯಕರವೆಂಬ ಪ್ರತೀತಿಯನ್ನು ಆಧಾರವಾಗಿಟ್ಟುಕೊಂಡಲ್ಲಿ ಹೊಳಪು ಇದ್ದಲ್ಲಿ ಲಕ್ಷ್ಮಿ ಇರುತ್ತಾಳೆಂದು ಹೇಳುವುದಕ್ಕೆ ತೊಂದರೆಯಿಲ್ಲ. ಆದರೂ ಕಿಲುಬು ಹಿಡಿದಲ್ಲಿ ಲಕ್ಷ್ಮಿ ಇರುವಳೆಂಬುದು ಇನ್ನೂ ಅರ್ಥವಾಗಲೊಲ್ಲದು.

ಕಿಲುಬು ಹಿಡಿದಲ್ಲಿ ಲಕ್ಷ್ಮಿ ಇರುತ್ತಾಳೆಂಬುದಕ್ಕೆ, ಒಬ್ಬರು ಮಹನೀಯರು, ಕರ್ಣಾಕರ್ಣಿಕೆಯಾಗಿ ಕೇಳಿದ ಒಂದು ನಂಬುಗೆಯ ವಿಷಯವನ್ನು ಹೀಗೆ ಹೇಳುತ್ತಾರೆ: "**ಹಳೆಯ ಹೆಂಗುಸರು ಕಿಲುಬು ಹಿಡಿದ ಪಾತ್ರವು ಸಂಪತ್ಕರವೆಂದು ನಂಬುತ್ತಿದ್ದರು. ಹೀಗಾಗಿ ಲೋಹದ ಪಾತ್ರೆಗಳಲ್ಲಿ ಕಿಲುಬು ಹಿಡಿದರೆ ಅದನ್ನು ಪ್ರಯತ್ನಪೂರ್ವಕ ತೆಗೆಯುವುದು ಸರಿಯಲ್ಲವೆಂಬ ಭಾವನೆ ಅವರಲ್ಲಿತ್ತು. ಆದರೆ ಇದು ಕೇವಲ ಕರ್ಣಾಕರ್ಣಿಕೆಯಾಗಿ ನಮ್ಮ ಊರಲ್ಲಿ ಕೇಳಿಬಂದ ನಂಬುಗೆ. ಇಂತಹ ನಂಬುಗೆ ಬೇರೆ ಕಡೆಗಳಲ್ಲಿಯೂ, ಕನ್ನಡ ನಾಡಿನ ಇತರ ಭಾಗಗಳಲ್ಲಿಯೂ ಇರುವುದಾದರೆ ನಾವು ಆ ನಂಬುಗೆಯನ್ನಾಧರಿಸಿ ಕಿಲುಬು ಹಿಡಿದಲ್ಲಿ ಲಕ್ಷ್ಮಿ ಇರುವಳೆಂದು ಅರ್ಥಮಾಡಬಹುದು.**"

ಇಂತಹ ಒಂದು ನಂಬುಗೆ ಕನ್ನಡ ನಾಡಿನಲ್ಲಿ ಬೇರೆ ಕಡೆಗಳಲ್ಲಿ ಎಲ್ಲಿಯಾದರೂ ಉಂಟೆ? ಈ ನಂಬುಗೆ ಬೇರೆ ಕಡೆಗಳಲ್ಲಿಯೂ ಉಂಟು ಎಂದಾದರೆ ಈ ನಂಬುಗೆಯನ್ನಾಧರಿಸಿ ಅರ್ಥಮಾಡುವುದು ಸರಿಯಾಗುವುದು.

ಅಂತೂ ಈ ಪದ್ಯದ ಅರ್ಥ ಸರಿಯಾಗಿ ಆಗದೆ ಉಳಿದಿದೆ. ಅಥವಾ, ಪದ್ಯವನ್ನು ಯಾವ ತಿದ್ದು

ಪಡಿಯೂ ಮಾಡದೆ ಮೂಲತಃ ಇದ್ದಕ್ಕಿದ್ದಂತೆ ಈ ರೀತಿ ಅರ್ಥಮಾಡಬಹುದೆ?

ಪ್ರತಿಬಿಂಬಕ್ರಿಯೆ ನೀರಿನಲ್ಲಿಯೂ ಇದೆ; ಕನ್ನಡಿಯಲ್ಲಿಯೂ ಇದೆ. ಆದರೆ ನೀರಿನಲ್ಲಿರುವ ಪ್ರತಿಬಿಂಬಕ್ರಿಯೆ ನೀರು ಚಂಚಲವಾದುದರಿಂದ ಶಾಶ್ವತವಾಗಿರದೆ ಕ್ಷಣಿಕವಾದುದು; ಕಿಲುಬು ಹಿಡಿವ ಸ್ವಭಾವದ ಕಂಚಿನ ಕನ್ನಡಿಯಲ್ಲಿ ಪ್ರತಿಬಿಂಬಕ್ರಿಯೆ ಭಂಗುರವಾಗದೆ ಶಾಶ್ವತವಾಗಿರುವುದು. ಹಾಗಾಗಿ 'ನೀನು, ಕನ್ನಡಿಯೊಳ್ (ಎಂದರೆ ಕನ್ನಡಿಯ ವಿಷಯದಲ್ಲಿ) ಜಲವಿರುವಲ್ಲಿ (ಕ್ಷಣಿಕವಾಗಿ) ಇದ್ದು, ಕಿಲುಬು ಹಿಡಿವ (ಸ್ವಭಾವದ ಕಂಚಿನ ಪಾತ್ರದ)ಲ್ಲಿ ಶಾಶ್ವತವಾಗಿರುವುದರಿಂದ, ನಿರ್ಮಲರಲ್ಲಿರದೆ ಮಲಿನರಲ್ಲಿ ಇರುತ್ತೀ ಎಂದು ಅರ್ಥಮಾಡಿದರೆ ಹೇಗಾಗುವುದು?

ಲಕ್ಷ್ಮೀ ವಿಡಂಬನೆಯ ಈ ವಿಚಾರವು ರನ್ನಕವಿಯ ಸ್ವಂತದ್ದೇನೂ ಅಲ್ಲ; ಪಂಪಭಾರತದಲ್ಲಿಯೂ ಇದೇ ರೀತಿ ಅಶ್ವತ್ಥಾಮನ ಲಕ್ಷ್ಮೀವಿಡಂಬನೆಯಿದೆ. ಇವರಿಬ್ಬರೂ ಸಂಸ್ಕೃತದ ಪ್ರಸಿದ್ಧ ಗದ್ಯಕಾರನಾದ ಕಾದಂಬರೀ ಕರ್ತೃವಾದ ಬಾಣಕವಿಯಿಂದ ಈ ಅಂಶವನ್ನು ಎತ್ತಿಕೊಂಡಿದ್ದಾರೆ. ಗದಾಯುದ್ಧದಲ್ಲಿ ಅಶ್ವತ್ಥಾಮನು ಮಾಡುವ ಲಕ್ಷ್ಮೀ ವಿಡಂಬನೆಯ ಹಲವು ಪದ್ಯಗಳು ಕಾದಂಬರಿಯಲ್ಲಿ ಚಂದ್ರಾಪೀಡನಿಗೆ ಯೌವರಾಜ್ಯಾಭಿಷೇಕ ಕಾಲದಲ್ಲಿ ಮಂತ್ರಿಯಾದ ಶುಕನಾಸನಿತ್ತ ಉಪದೇಶದ ಮಾತುಗಳ ಭಾಷಾಂತರಗಳೇ ಆಗಿವೆ. ಹಾಗೆ ಈ ಪದ್ಯದ ಅರ್ಥವು ಅದರಲ್ಲಿ ಹೇಗಿದೆಯೆಂದು ಹುಡುಕಿ ನೋಡಿದರೆ ಅಲ್ಲಿಯೂ ಈ ಒಂದು ಪದ್ಯದಲ್ಲಿ ಹೇಳಿದ ವಿಚಾರ ಮಾತ್ರ ಕಂಡುಬರುವುದಿಲ್ಲ. ನಮಗೆ ದೊರಕದ, ಇತರ ಪತ್ರ ಪ್ರಕಟವಾದ ಯಾವುದಾದರೂ ಸಂಸ್ಕೃತ ಕಾದಂಬರಿಯಲ್ಲಿ ಮೇಲಿನ ಪದ್ಯದ ಅಭಿಪ್ರಾಯ ಉಂಟೋ ಎಂದು ತಿಳಿದರೂ ಉಪಕಾರ ಆಗುತ್ತಿತ್ತು. ಅಂತೂ ಸಂಸ್ಕೃತ ಕಾದಂಬರಿಯ ಭಾಷಾಂತರವಾಗಿರುವ ನಾಗವರ್ಮನ ಕರ್ಣಾಟಕ ಕಾದಂಬರಿಯಲ್ಲಿಯೂ ಈ ಪದ್ಯದ ಹೊಂದಿಕೆಯ ಪದ್ಯವಾಗಲಿ ಗದ್ಯವಾಗಲಿ ಕಂಡುಬರುವುದಿಲ್ಲ. ಇದರ ಸಮಾನಾರ್ಥಕವಾದ ಗದ್ಯವಾಗಲಿ ಪದ್ಯವಾಗಲಿ ಸಂಸ್ಕೃತ ಹಾಗೂ ಕರ್ಣಾಟಕ ಕಾದಂಬರಿಗಳಲ್ಲಿ ದೊರಕಿದರೆ ಅರ್ಥವು ಸುಲಭವಾಗುತ್ತಿತ್ತು.

ಅಂತೂ, ಸದ್ಯಕ್ಕೆ ಈ ಪದ್ಯದ ಅರ್ಥ ಒಂದು ಸಮಸ್ಯೆಯಾಗಿದೆ. ನಮಗೆ ಹೊಳೆಯುವ ಅರ್ಥಗಳನ್ನೂ, ನಮಗೆ ಬಂದ ಸಮಸ್ಯೆಗಳನ್ನೂ ಕನ್ನಡ ವಿದ್ವಾಂಸರ ಮುಂದೆ ಇರಿಸಿದ್ದೇವೆ. ಬಲ್ಲವರು ಇದರ ಅರ್ಥವೇನೆಂದು ತಿಳಿಸಿದರೆ ನಾವು ಅತ್ಯಂತ ಕೃತಜ್ಞರಾಗುವೆವು. ಮೇಲಿನ ಪದ್ಯದ ಅರ್ಥದ್ವಿಕುರಿತು ಒಂದು ನಿಷ್ಕೃಷ್ಟಾರ್ಥಕ್ಕೆ ಬಂದಲ್ಲಿ ರನ್ನ ಕಾವ್ಯಾಭ್ಯಾಸಿಗಳಿಗೆ ಉಪಕಾರಮಾಡಿದಂತಾಗುವುದು.

## ದ್ವಾರಕಾ ನಿರ್ಮಾಣ

### ಹರಿವಂಶದಿಂದ

ಶ್ರೀ ಕೆ. ವೆಂಕಟರಾಯಾಚಾರ್ಯ, ವಿದ್ವಾನ್, ಸುರತ್ಕಲ್ಲು.

'ರುಕ್ಮಿಣೀ ಸ್ವಯಂವರ'ದ ಕಥಾಂತರಿತವಾಗಿ ದ್ವಾರಕಾ ನಿರ್ಮಾಣದ ಕತೆಯು ವಿಸ್ತಾರವಾಗಿಯೂ ಸ್ವಾರಸ್ಯವಾಗಿಯೂ ನಿರೂಪಿತವಾಗಿದೆ, ಹರಿವಂಶದಿಂದ ಆ ಸಂದರ್ಭವನ್ನು ಎತ್ತಿ ಬರೆಯಲಿದೆ.

ಜನಮೇಜಯ:—ವಿದರ್ಭ ಪತ್ತನದಿಂದ ಹಿಂದಿರುಗುತ್ತಾ ಕೃಷ್ಣನು ಅದೇಕೆ ಗರುಡನನ್ನು ಸಂಗಡ ಕರದೊಯ್ದನು? ಅವನಿಂದೇನು ಕೆಲಸವಾಯಿತು? ದಾರಿಯಲ್ಲಿ ಗರುಡನನ್ನೇರಿದುದೂ ಇಲ್ಲವಷ್ಟೆ!

ವೈಶಂಪಾಯನ:—ಕೃಷ್ಣನು ಮಥುರೆಗೆ ಮುಟ್ಟುವ ಮೊದಲೇ ಗರುಡನು, ಕೃಷ್ಣನು ರಾಜರೊಡನೆಂದ 'ಮಥುರೆಗೆ ಹೋಗುವೆನೆಂಬ ಮಾತನ್ನು' ನೆನೆದು ಹೇಳಿದನು—ದೇವಾ, ರೈವತನ ಪಟ್ಟಣವಾದ ಕುಶಸ್ಥಲಿಗೂ ನಂದನವನಕ್ಕೆ ಸಮನಾದ ರೈವತಬೆಟ್ಟದತ್ತಲೂ ಹೋಗುವೆನು. ಅದನ್ನು ರಕ್ಕಸರು ಹಾಳುಗೆಡವಿದ್ದಾರೆ, ಅದು ಕಡಲ ತಡಿಯಲ್ಲಿದೆ. ಅನೇಕ ಪಶುಪಕ್ಷಿಗಳ ಆವಾಸಯೋಗ್ಯವಿದೆ. ಅದು ನಿನಗೊಪ್ಪಿದರೆ, ಅದನ್ನು ನಿನ್ನ ಬೀಡು ಮಾಡಲಾದೀತು. ಇದೀಗ ನಾನು ಹೋಗಿ ಅಲ್ಲಿಯ ಮುಳ್ಳಿನಂತಹ ಕಷ್ಟಸ್ಥಿತಿಗಳನ್ನು ನೀಗಿಸಿ ಬರುವೆನು—ಎಂದು, ಕೃಷ್ಣನಿಗೆ ಮಣಿದು, ಒಪ್ಪಿಗೆ ಪಡೆದು ಪಡುಮೊಗನಾಗಿ ಹಾರಿದನು. ಕೃಷ್ಣನು ಮಥುರೆಯತ್ತ

ತೆರಳಿದನು, ಅಲ್ಲಿ ಎಲ್ಲರೂ ಕೃಷ್ಣನನ್ನು ಇದಿರ್ಗೊಂಡರು. ಹಾಗೂ ವಿದರ್ಭದಲ್ಲಾದ ಪಟ್ಟಾಭಿಷೇಕ, ಇಂದ್ರನ ದೂತಾಗಮನ ಮೊದಲಾದ ಹೆಚ್ಚಳವನ್ನು ತಿಳಿದರು. ಅನೇಕ ದಾನಧರ್ಮಗಳನ್ನು ನೆರವೇರಿಸಿದರು. ಮತ್ತೆ ಸಭಾಮಂಟಪವು ಸಿಂಗರಿಸಲ್ಪಟ್ಟಿತು. ವಸುದೇವನ ಮನೆಯಿದಿರು ತೋರಣವಿಟ್ಟಿತ್ತು. ಬೀದಿಯೆಲ್ಲೆಡೆ ಸಿಂಪಡಿಸಿತ್ತು. ಊರ ಸುತ್ತಲೂ ಅಲಂಕಾರವೇ ಅಲಂಕಾರ! ದಾರಿಯುದ್ದಕ್ಕೂ ಕಾಲ್ಮೆಟ್ಟಲು ಬಟ್ಟೆ ಮುಚ್ಚಿತ್ತು. ಎಲ್ಲಾ ಜನರು ಸಜ್ಜಾಗಿ ಎದುರಾಯಿಸುತ್ತಿದ್ದರು. ಉಗ್ರಸೇನನು ಕೃಷ್ಣನನ್ನು ಹೊಗಳಬಯಸಿದನು. ಆಗ ಬಲರಾಮನು–ಹೊಗಳತಕ್ಕುದಲ್ಲೆಂದು, ಹೊಗಳದೇನೇ ಕೃಷ್ಣನಿಗೆ ಸಂತಸವಹುದೆಂದೂ, ಹಾಗೇ ಅರಸೊತ್ತಿಗೆಗೆ ತಕ್ಕಂತೆ ಇದಿರಾಗೇವೆಂದಂತೆ–ಕೃಷ್ಣನೂ ಅದನ್ನೊಪ್ಪಿದನು. ಇಂದ್ರದತ್ತವಾದ ಒಳ್ಳೆಯ ಒಡವೆಗಳಿಂದ ಆತನನ್ನೂ, ದೀನಾರವೆಂಬ ನಾಣ್ಯದಿಂದ ಪ್ರಜಾ, ಸೇವಕರನ್ನೂ ಸಂತುಷ್ಟಿಗೊಳಿಸಿದನು. ತನ್ನ ತಂದೆಯ ಅರಮನೆಯಲ್ಲಿ ಆ ಇಂದ್ರದತ್ತವಾದ ಸಿಂಹಾಸನವನ್ನು ಇರಿಸಿದನು. ಆ ಹುಟ್ಟು ಮತ್ತು ಸಾಕು ತಂದೆತಾಯಿಗಳು ಏನೆಂದು ಹೇಳಲೂ ಬಾಯ್ಬರದಂತಾದರು. ಕಂಸಮಾತೆಯು ಕೃಷ್ಣನನ್ನು ಸತ್ಕರಿಸಿ ಅನೇಕ ವಸ್ತು ನಾಣ್ಯಗಳನ್ನಿತ್ತರು. ಅವನ್ನು ಸತ್ಕಾರ್ಯಕ್ಕೆ ವಿನಿಯೋಗಿಸುವಂತೆ ಉಗ್ರಸೇನನಿಗೊಪ್ಪಿಸಿದನು, ಮತ್ತೆ ವಸುದೇವನ ಮನೆಗೈದಿ ಆಯುಧಗಳನ್ನು ಕೆಳಗಿರಿಸಿ ನಿತ್ಯಕರ್ಮಗಳನ್ನು ಮಾಡತೊಡಗಿದನು.

**ಗರುಡಾಗಮನ**

ಇತ್ತ ಅದೇ ಕಾಲದಲ್ಲಿ ಉತ್ಪಾತಗಳು ಕಾಣಬಂದುವು. ಅವೆಂದರೆ, ಗರುಡನ ಬರುವಿಕೆಯ ಮಹತ್ತೆಂದು ರಾಮಕೃಷ್ಣರು ತಿಳಿದರು, ಹಾಗೂ ಗರುಡನು ಕೂಡ ಮೂರನೆಯವರಾಗಿ ಉಗ್ರಸೇನನ ಆಲೋಚನಾ ಮಂದಿರದಲ್ಲಿ ಕುಳಿತರು. ಕೃಷ್ಣನೆಂದನು:–ಜರಾಸಂಧನ ಬಲವು ಅದೆಂತೂ ಸಹಿಸಲಸದಳವು. ಆ ಕಾರಣ ನಾವಿಲ್ಲದಿರುವುದು ಸರಿಯಲ್ಲೆಂದು ನನಗೆ ತೋರುತ್ತದೆ!

ಆಗ ಗರುಡನೆಂದುದು:–ನಿನ್ನ ಆಣತಿಯಂತೆ ನಾನು ಕುಶಸ್ಥಲಿಯನ್ನು ಕಂಡೆನು. ಕಡಲತಡಿಯಲ್ಲಿ ಬೆಟ್ಟಗಳ ಸಹಾಯ ಒಂದಿದೆ. (ಸುತ್ತ ಕೋಟೆಯಂತಿವೆ). ರೈವತ ಬೆಟ್ಟವು ಅತೀವ ರಮ್ಯ. ಅಲ್ಲಿ ನಿನ್ನ ವಾಸಕ್ಕೆ ತಕ್ಕುದು. ಅದೇ ದ್ವಾರಕಿಯೆಂದು ಖ್ಯಾತಿಯಾಗಲಿ, ಅಂದರೆ, ಅದರ ಸುತ್ತ ನೆಲವನ್ನು ಕಡಲಿಂದ ಪಡೆವರೆ ಅಲ್ಲೊಂದು ಪಟ್ಟಣವನ್ನೂ ನಿರ್ಮಿಸಬಹುದು, ಆಮೇಲದು ದೇವಲೋಕವೇ ಸೈ!

ಅಲ್ಲಿಂದ ಗರುಡನನ್ನು ಬೀಳ್ಕೊಟ್ಟರು. ಮತ್ತೆ ಏಕಾಂತದಲ್ಲಿ ಉಗ್ರಸೇನನು–ನಿನ್ನ ಹೊರತು ನಮಗೆ ನೆಮ್ಮದಿಯಿಲ್ಲ. ನಿನ್ನೊಂದಿಗಿದ್ದು ಇದಿರಾಳಿಗಳನ್ನು ಸದೆದು, ಸುಖಿಯಾಗೇವೆನ್ನಲು ಹಾಗೆಯೇ ಮಾಡೋಣವೆಂದು ಕೃಷ್ಣನು ಉತ್ತರಿಸಿದನು. (೧೧೪ ಅ. ೧೨೮ ಶ್ಲೋ).

ಆಲೋಚನೆ:–ಆಮೇಲೊಂದು ದಿನದಲ್ಲಿ ಕೃಷ್ಣನು ಯಾದವರ ಸಭೆಯಲ್ಲಿ ಸಕಾರಣವಾಗಿ ಈ ರೀತಿ ಹೇಳಿದನು: ಈ ಮಥುರೆಯು ಯಾದವರ ನೆಲೆಯು. ನಾವಿಲ್ಲಿ ಹುಟ್ಟಿ ವ್ರಜದಲ್ಲಿ ಬಳೆದವರು. ಆದರೀಗ ದುಃಖವಿಲ್ಲಿ ಕಾಣದು, ಎದುರಾಳಿಗಳು ಸೋತರು. ಅದರಿಂದಾಗಿ ಅರಸರೆಲ್ಲರಿಗೆ ಹಗೆತನ ಬಳೆಯಿತು, ಜರಾಸಂಧನೊಡನೆ ಕಾಳಗವೂ ಆಯಿತು. ಇನ್ನೀ ನಮ್ಮ ಪರಿವಾರ ತಕ್ಕಷ್ಟು ತುಂಬಿದೆ. ಅದರೊಂದಿಗೆ ಈ ಬುವಿಯು ನಮ್ಮೆದುರಾಳಿಗಳಿಗೆ ಬರಲಾಗದಂತಹದಾಗಿದೆ. ಅಂದರೆ ಬೆಳಿಗೆಯು ಸರ್ವತೋಮುಖವಾಗಿದೆ. ನಮ್ಮ ವಾಸಕ್ಕಿದು ಚಿಕ್ಕದಾಗುತ್ತಾ, ಸಮರ್ಥವಾಗುತ್ತದೆ. ಆ ಕಾರಣ, ನಮ್ಮ ಬೀಡನ್ನು ಬೇರೆಡೆಗೊಯ್ಯುವ ಹವಣಿಕೆಯಲ್ಲಿದ್ದೇನೆ. ಈ ನನ್ನಾಯವು ನಿಮಗೆ ನಂಬುಗೆಯಾದೀತೆಂದು ತೋರುತ್ತದೆ. ಅಲ್ಲಿ ಇದಕ್ಕೆಲ್ಲರೂ ಒಪ್ಪಿದರು.

**ಪಯಣ**–ಅತ್ತ ಕಾಲಯವನನು ಪಡೆಯೊಡಗೂಡಿ ಬರುತ್ತಿದ್ದನು. (ಇವನಿಗೆ ಜರಾಸಂಧನ ಕಡೆಯಿಂದ ಸಾಲ್ವನು ಕರೆಯಿತ್ತುದನ್ನು 'ರುಕ್ಮಿಣಿ ಸ್ವಯಂವರದ ಕಥಾಪ್ರಪಂಚ'ವೆಂಬ ಈ ಮೊದಲಿನ ಕತೆಯಲ್ಲಿದೆ. ವಾಚಕ ಮಹಾಶಯರು ಅದನ್ನು ಓದಬಹುದು. ಇನ್ನೊಂದೆಡೆ ಜರಾಸಂಧನ ಸವಾರಿಯೂ ಬರುತ್ತಿತ್ತು. ಆಗ ಅವರೆಲ್ಲಾ ಯಾದವರು ಕೃಷ್ಣನೊಂದಿಗೆ ಹೀಗೆಂದು ಬಗೆದರು: ಇಂದೇ ನಮ್ಮ ಪಯಣಕ್ಕೆ ಸುದಿನವು–ಎನ್ನುತ್ತಾ ಡಂಗುರ ಹೊಡೆದು ಎಲ್ಲವರು ಕೂಡಿ ಪಡುಮೊಗವಾಗಿ ಪಯಣವಾದರು. ಆ ಕಡಲಡಲತಡಿಯ ಮನೋಹರ ಸನ್ನಿವೇಶವುಳ್ಳ ಎಡೆಗಳಲ್ಲಿ ಬೀಡುಬಿಟ್ಟರು. ರೈವತಪರ್ವತಕ್ಕೆ ದೂರವಲ್ಲದ, ಹಿಂದಕ್ಕೆ ಏಕಲವ್ಯನು ದ್ರೋಣರಿಂದೊಡಗೂಡಿ ಬಹುಕಾಲ ವಾಸಿಸಿದ, ರೈವತ

ನಿಂದ ಸೃಷ್ಟಿಸಲ್ಪಟ್ಟ, ದ್ವಾರಾವತಿಯೆಂಬ ಪಟ್ಟಣವೇ ತಕ್ಕುದೆಂದು, ಹೊತ್ತು ಕಂತುವಾಗ ಆ ಪಡೆಯೊಳ ಹೊಕ್ಕಿತು. ಅಲ್ಲಿ ಅವರವರಿಗೆ ತಕ್ಕ ವಾಸದೇರ್ಪಾಡು ಮಾಡಿದ್ದಾಯ್ತು. (ಅ. ೧೧೫, ಶ್ಲೋ. ೩೬).

**ಕಾಲಯವನನ ಹುಟ್ಟು–**

ಜನಮೇಜಯನು– ಓ ಮುನಿಶ್ರೇಷ್ಠಾ, ಶ್ರೀಕೃಷ್ಣನ ಚರಿತೆಯನ್ನು ವಿಸ್ತರವಾಗಿ ಕೇಳಬಯಸುವೆನು. ಆತನು ಮಥುರೆಯನ್ನು ಬಿಟ್ಟು ಹೋದುದೇಕೆ? ಅದು ಮಧ್ಯ ದೇಶಕ್ಕೆ ಹೆಚ್ಚಳದ್ದು, ಐಸಿರಿಯ ನೆಲೆಯದು, ಬುವಿಯ ಹೆಮ್ಮೆಯ ತಲವು. ಸರ್ವಸಮೃದ್ಧಿಯ ಆಲಯವು. ಅಲ್ಲಿರದೆ, ಅಲ್ಲಿ ಯುದ್ಧವಾಗದೆ, ಏಕಾಗಿ ಬಿಟ್ಟನು? ಆ ಕಾಲಯವನನು ಅದೇನು ಮಾಡಿದನು? ನೀರ ಸುತ್ತಲ ದ್ವಾರಕೆಗೈದಿ ಕೃಷ್ಣನು ಏನು ಮಾಡಿದ್ದಾನು? ಆವನಿಗಾಗಿ ಕೃಷ್ಣನು ಹಿಮ್ಮೊಗನಾದನೋ, ಆ ಕಾಲಯವನನು ಆದಾರ ಮಗನು? ಎಂದು ಜಿಜ್ಞಾಸುವಾದನು.

ಅದಕ್ಕೆ ವೈಶಂಪಾಯನೆಂದುದು :– ಗಾರ್ಗ್ಯನು ವೃಷ್ಣಿ ಅಂಧಕರ ಗುರು. ಆವನು ಹಿಂದಕ್ಕೊಮ್ಮೆ ಬ್ರಹ್ಮಚಾರಿಯಾಗಿದ್ದನು, ಹೆಂಡಿರನ್ನು ಹೊಂದಿಲ್ಲ. ಅವನನ್ನೊಮ್ಮೆ ಶಿಶಿರಾಯಣನ ಮಗನಾದ ಶಾಲನು 'ಷಂಢ'ನೆಂದು ಸಭೆಯಲ್ಲಿಯೇ ಹೀಗಳೆದನು. ಆದನ್ನು ಕೇಳಿ, ಮಗನನ್ನು ಪಡೆಯಲು ತಪಸ್ಸು ಮಾಡಿದನು, ಹನ್ನೆರಡು ವರುಷವೆಲ್ಲಾ ಕಬ್ಬಿಣ ಮೆಲ್ಲುತ್ತಾ ರುದ್ರನನ್ನು ಕುರಿತು ತಪವೆಸಗಿದನು. ರುದ್ರನು, ವೃಷ್ಣಿ ಅಂಥಕರನ್ನು ಗೆಲ್ಲುವ ಮಗನನ್ನು ವರವಿತ್ತನು.

ಇದನ್ನೆಲ್ಲಾ ಯವನ ದೇಶಾಧಿಪನು ಕೇಳಿ ತಿಳಿದಿದ್ದನು, ಅವನು ಗಾರ್ಗ್ಯನನ್ನು ಕರೆತರಿಸಿ, ಸ್ತ್ರೀಯರ ಗಡಣದಲ್ಲಿರಿಸಿದನು. ಅಲ್ಲಿ ಗೋಪಾಲಿ ಎಂಬವಳಲ್ಲಿ ಗರ್ಗನಿಂದ ಗಬ್ಬವಾಗಿ ಕಾಲಯವನನು ಹುಟ್ಟಿದನು. ಆ ರಾಜನನಂತರ ಅಲ್ಲಿನ ಅರಸನಾದನು.

ಇವನೊಮ್ಮೆ ಯುದ್ಧಾಭಿಲಾಷಿಯಾಗಿ ಬ್ರಾಹ್ಮಣರನ್ನು ವಿಚಾರಿಸಿದನು. ಆಗ ನಾರದನು ಅಲ್ಲಿಗೈದಿ, ಅವನ ಕುಲ–ಜನನಲಗ್ನಳ ಹೇತು ವಿಸ್ತಾರಗಳನ್ನು ಬಣ್ಣಿಸಿದನು.

ಇತ್ತ ಕೃಷ್ಣನು ನಾರದನಿಂದ ಆತನ ವೃತ್ತವನ್ನು ಕೇಳಿ, ಸುಮ್ಮನಿದ್ದನು. ಅತ್ತ ಬಳೆಯುತ್ತಿರುವ ಕಾಲಯವನನಲ್ಲಿ ಮ್ಲೇಂಛರೆಲ್ಲಾ ಒಟ್ಟುಗೂಡಿದರು. ಆ ಗಡಣದೊಡಗೂಡಿ ಮಥುರೆಗೆ ಪಯಣವಾದನು. ಆ ಪಡೆಯೋ ಬುವಿಯನ್ನು ಅಲುಗಾಡಿಸುತ್ತಿತ್ತು. ನಡೆವಾಗ ದೂಳಿಯಿಂದ ಸೂರ್ಯರಶ್ಮಿಯನ್ನು ತಡೆಯುತ್ತಿತ್ತು, ಹೆಚ್ಚೇಕೆ? ಪಡೆಯ ಮಲಮೂತ್ರಗಳಿಂದ ದೊಡ್ಡ ತೊರೆಯೊಂದು ಹುಟ್ಟಿತ್ತು. (ಅದೇ ಅಶ್ವಶಕೃನ್ನದಿಯು!)

ಈ ಬರುವಿಕಯನ್ನು ತಿಳಿದು ಕೃಷ್ಣನು ಬಂಧುಗಳೊಡನೆ ಯೋಚಿಸಿ, ಆತನೊಡನೆ ಕದನವೇ ಸರಿ' ಯೆಂದು ಒಂದು ಕೊಡದಲ್ಲಿ ಕೃಷ್ಣಸರ್ಪವನ್ನು ಕಟ್ಟಿ ದೂತನಿಂದ ಅವನಿಗೆ ಕಳುಹಿದನು. ಅಂದರೆ, ಕೃಷ್ಣನು ಹೀಗಾಗಿದ್ದಾನೆಂಬುದಕ್ಕೊಂದು ನಿದರ್ಶನವದು! ಕಾಲಯವನನಾದರೋ, ಆ ಕೊಡಕ್ಕೆ ತುಂಬಾ ಇರುವೆಗಳನ್ನು ತುಂಬಿ ಹಿಂದೆ ಕಳುಹಿದನು. ಒಳಗಿನ ಹಾವು ಇರುವೆಯಲ್ಲಾ ಕಚ್ಚಿ ಸುಟ್ಟು ಸುಣ್ಣಾಗಿತ್ತು. ಈ ತೆರದ ಉಪಾಯ ಪ್ರತೀಕಾರಗಳ ಅರ್ಥವನ್ನು ತಿಳಿದಾ ಕೃಷ್ಣನು ಆ ಕೂಡಲೇ ದ್ವಾರಕಿಗೆ ತೆರಳಿದುದು, ಅಲ್ಲಿದ್ದು ಪ್ರತೀಕಾರಕ್ಕಾಗಿ.

**ಯವನವಧೆ**

ಶ್ರೀ ಕೃಷ್ಣನು ತನ್ನ ಪಂಗಡದವರನ್ನೆಲ್ಲಾ ಅಲ್ಲಿ ಇರಿಸಿ, ಸಮಾಧಾನಿಸಿ, ತಾನೊಬ್ಬನೇ ಕೈವಾರಿಯಾಗಿ ಮಥುರೆಯತ್ತ ಬರುತ್ತಿದ್ದನು. ಅವನನ್ನು ಕೊಲ್ಲಲೆಳಸಿದ ಯವನನು ಅದೆಷ್ಟು ಬೆನ್ನಟ್ಟಿದರೂ ಹಿಡಿಯಲಾರದಾದನು.

ಇತ್ತ ಮಾಂಧಾತನ ಮಗನಾದ ಮುಚುಕುಂದನು ದೇವರ್ಕಳಿಗೆ ಯುದ್ಧ ಸಹಾಯಕನಾಗಿ, 'ತನ್ನನ್ನೆಬ್ಬಿಸುವವರನ್ನು ಕಣ್ಗಿಡಿಯಿಂದಲೇ ಸುಟ್ಟುರಿವ ವರವನ್ನು ಪಡೆದು, ಒಂದು ಗುಹೆಯಲ್ಲಿ ಮಲಗಿದ್ದನು. ಅದನ್ನು ನಾರದನಿಂದ ತಿಳಿದ ಕೃಷ್ಣನು ಒಳಹೊಕ್ಕು, ಮುಚುಕುಂದನ ತಲೆಮರೆಯುಲ್ಲಿ ಅಡಗಿದನು. ಯವನನು ಒಂಟಿಯಾಗಿ ಅಟ್ಟಬರುತ್ತಾ ಅಲ್ಲಿ ಬಂದು, 'ಆ ಮಲಗಿದವನು ಕೃಷ್ಣನೆಂದೇ ಭಾವಿಸಿ' ಕಾಲಿಂದ ಒದೆದನು. ಆ ನಿದ್ರಾಭಂಗದಿಂದಲೂ, ಕಾಲ ಒದೆತದಿಂದಲೂ ಎಚ್ಚತ್ತು ಮುಚುಕುಂದನು ಸಿಟ್ಟುರಿಯಾಗಿ ನೋಡಲು; ಯವನನು ಬೂದಿಯುಳಿಕೆಯಾದನು.

ಆಗ ಕೃಷ್ಣನು ತನ್ನ ಇದಿರಾಳಿನ ಕೊಲೆಯಾಗಲು, ತಾನು ಇದಿರು ಬಂದು ಅಲ್ಲಿ ನಡೆದುದೆಲ್ಲಾ ಹೇಳಿದನು, ತನಗೆ ಅದೆಷ್ಟಕ್ಕೂ ಸಾಯಲೀಸದ ಯವನನು ದೈವ ವರಬಲದಿಂದಲೇ ಸುಟ್ಟುದನ್ನರುಹಿದನು. ಮುಚುಕುಂದನನು ತ್ರೇತೆಯವನು! "ಇದೀಗ ಕಲಿಯುಗವೆಂದೂ, ಮಾನವರೆಲ್ಲರೂ ಬಹಳೇ ಕುಳ್ಳರೂ ಅಲ್ಪರೂ

ಆಗಿರುವರೊಂದಿಗೆ ತನ್ನ ಪಟ್ಟಣವು ಇತರರಿಂದ ಆಕ್ರಮಿತವಾದುದನ್ನೂ" ಅರಿತನು. ಅಲ್ಲಿಂದ ಹಿಮತ್ಪರ್ವತದತ್ತ ತಪಕ್ಕೆ ತೆರಳಿ, ಅಲ್ಲೇ ದೇಹಬಿಟ್ಟನು.

ಕೃಷ್ಣನು ಹಿಂದಿರುಹಿ, ಯವನನ ಪಡೆ, ಹಣ, ವಸ್ತುಗಳನ್ನೆಲ್ಲಾ ಪಡೆದು ಉಗ್ರಸೇನನಿಗೆ ಅರ್ಪಿಸಿದನು. (ಅ ೧೧೬, ಶ್ಲೋಕ ೭೨).

**ದ್ವಾರಕಿಯ ನಿರ್ಮಾಣ–**

ಅನೇಲೆ ಬೆಳಗಾಗಲು, ಎದ್ದು ನಿತ್ಯಜಪಗಳನ್ನು ಮಾಡಿದ ಕೃಷ್ಣನು. ಮತ್ತು ಅಲ್ಲಿ ಕೋಟೆಯನ್ನು ಕಟ್ಟಿ, ಸರಿಗೈಯಲುಯೋಚಿಸಿದನು........

ಒಂದು ರೋಹಿಣಿಯ ದಿನದಲ್ಲಿ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿದನು. "ನಮ್ಮಾ ವಿಶಾಲ ಭೂಮಿಯನ್ನು ದೇವಲೋಕದಂತೆ ಮಾಡಿದ್ದಾಯ್ತು, ಮುಂದೆ ಹೆಸರುವಾಸಿಯಾಗುವಂತೆ ಹೆಸರಿಕ್ಕಿದ್ದೂ ಆಯ್ತು. ದ್ವಾರವತಿಯೆಂದು. ದೇವರ್ಕಳಿಗೆ ಸ್ವರ್ಗದಂತೆ ನಮಗೆ ಈ ಭೂಮಿಯು. ಅದೇ ತೆರದ ಗುರುತು ಗುಡಿಗಳನ್ನು ಇಲ್ಲಿ ಕಟ್ಟಿಸುವೆನು. ನಾಲ್ಕು ಬೀದಿಗಳೂ, ಹೆಂಗಳಿಗೆ ತಕ್ಕ ಬೀಡುಗಳೂ ಆಗಬೇಕು. ನಿಮಗೆ ತಕ್ಕ ಮನೆಗಳನ್ನು ಆರಿಸಿರಿ" ಈ ಮೊದಲಾಗಿ ಕೃಷ್ಣನು ಸೂಚನೆಗಳನ್ನು ಕೊಟ್ಟನು. ಅಂತೆ ಜಾಗಕ್ಕೆ ತಕ್ಕ ಮನೆಕಟ್ಟನ ಗುರುತವಿಕ್ಕಿದರು. ಒಳ್ಳೆಯ ದಿನದಲ್ಲಿ ಪ್ರಾಜ್ಞರಿಂದ ಗೃಹಪ್ರವೇಶಕ್ಕೆ ಅನುವು ಮಾಡಿದರು. ಅಲ್ಲಿ ಬ್ರಹ್ಮಾದಿ ದೇವರ್ಕಳ ಗುಡಿಗೆ ತಲಕಟ್ಟನ್ನು ಗೊತ್ತುಮಾಡಿದ್ದರು. ನೀರು, ಬೆಂಕಿ, ಇಂದ್ರಾಲಯ, ಕುಟ್ಟುವ ಕಲ್ಲಿನೊಂದಿಗೆ ಜಡ್ಡೆಗಳಿಗೂ (ಅಪಾಮಗ್ನೇಃ ಸುರೇಶಸ್ಯ ದೃಷದೋಲೂಖಲಸ್ಯ ಚ) ನಾಲ್ಕು ಮೂಲೆಗಟ್ಟಿದ್ದರು. ನಾಲ್ಕು ಬಾಗಿಲುಗಳಲ್ಲಿ ಕ್ರಮವಾಗಿ ತೆಂಕಲು ಶುದ್ಧಾಕ್ಷ, ಮೂಡಲು ಇಂದ್ರ, ಬಡಗಲು ಭಲ್ಲಾಟ, ಪಡುವಿಗೆ ಪುಷ್ಪದಂತದಂತೆಯೂ ಚಿತ್ರಿಸಿದರು. ಹೀಗೆ ಕೃಷ್ಣನ ಮನೆಯೂ ಪೂರೈಸಿತ್ತು. ವಿಶ್ವಕರ್ಮನಿಂದ. ಆದರೂ ಆ ಜಾಗವು ಆ ಜನತೆಗೆ ತಕ್ಕಷ್ಟಿಲ್ಲವಾಗಿ, ಸುತ್ತಲ ನಾಲ್ಕು ಬದಿಯ ಕಡಲಲ್ಲಿ ಹನ್ನೆರಡು ಯೋಜನದಷ್ಟು ನೆಲದಲ್ಲಿ ಕೃಷ್ಣನೆಂದಂತೆ ಕಡಲು ಒಳಗೆಳೆಯಿತು. ಮತ್ತೆ ಸಮಕಟ್ಟಿದ ಪುರಿಯು ಹೆಂಗಸಂತೆ ಕಂಗೊಳಿಸಿತ್ತು. ಸ್ವರ್ಗಕ್ಕೆ ಇಂದ್ರನ ಬೀಡಿನಂತೆ, ಕಡವಿಗೊಂಡು ಆ ಪಟ್ಟಣದ ಶೋಭೆಯಾವರಿಸಿತ್ತು; ಅದು ಬುವಿಗದೊಂದೇ. ಅದು ರತ್ನಗಳ ನೆಲೆಮನೆಯಂತಿತ್ತು; ದೇವತೆಗಳಿಗೂ ತವರ್ಮನೆಯಂತಿತ್ತು; ಇದಿರಾಳುಗಳಿಗೆ ಕಿರುಕುಳವಾಗಿಸುತ್ತಿತ್ತು. ಒಟ್ಟು ಚಿಕ್ಕ ತಾರಗೆಗಳಿಂದ ತುಂಬಿದ ಆಗಸದಂತೆ, ಜನ ಗೃಹ ಉದ್ಯಾನಗಳಿಂದ ಆ ಪಟ್ಟಣವು ತುಂಬಿತ್ತು.

ಅಲ್ಲಿ ಕೆಂಪುಕೋಟೆಯ ಮೇಲೆ ಚಿನ್ನದ ಕಲಶ, ಚಿನ್ನ ತುಂಬಿದ ಮನೆ, ಬಿಳಿ ನೋಡದಂತಿದ್ದ ಬಿಡುವುಳ್ಳ ಮೇಲುಪ್ಪರಿಗೆ, ಬಿಡಿಯಾದ ಬಾಗಿಲುಗಳೂ ಇದ್ದುವು. ಶಂಖವೆಂಬ ನಿಧಿಯನ್ನು ತರಿಸಿದುದರಿಂದ, ಪ್ರತಿಗೃಹದಲ್ಲೂ ಕೊಪ್ಪರಿಗೆಯ ನೆಲೆಯಿತ್ತು. ದೇವಸಭೆಯನ್ನು ತರಿಸಿ, ಪಟ್ಟಣದ ನಡುವಿರಿಸಿದನು.

**ರಾಜ್ಯವ್ಯವಸ್ಥೆ**–ರಾಜ್ಯಭಾರಕ್ರಮದಲ್ಲಿ ಅದೊಂದು ವ್ಯವಸ್ಥೆ ಮಾಡಿಸಿದನು. ಗುಂಪುಕೂಟ, ಪ್ರತಿನಿಧಿಗಳು, ಪಡೆವಾಳರು, ಜನಪಾಲಕರು, ಇವರೆಲ್ಲರ ಒಡೆತನವು ಉಗ್ರಸೇನನಿಗೆ ದೊರೆಯಿತು. ಸಾಂದೀಪನು ಅವರ ಗುರುವು. ಅನಾದೃಷ್ಟಿಯು ಪಡೆಯೊಡೆಯನು. ವಿಕದ್ರುವು ಮಂತ್ರೀಶ್ವರನು. ಹತ್ತು ಮಂದಿ ಕುಲಾಧಿಪರು ಇವರೆಲ್ಲರ ಮೇಲ್ನೋಟಕ್ಕೆ ಇದ್ದಾರೆ. ಹೀಗೆಲ್ಲಾ ಒಂದು ಕಟ್ಟುಮಾಡಿ ಕೃಷ್ಣನು ಸುಖವಾಗ್ಧಿದ್ದನು. ಬಲರಾಮನಿಗೆ ರೇವತನ ಮಗಳೊಂದಿಗೆ ಮದುವೆಯಾಯ್ತು (ಅ. ೧೧೭. ಶ್ಲೋ. ೮೫).

ಈ ಮೇಲಣ ಹೇಳಿಕೆಯಂತೆ 'ಹರಿವಂಶ'ದಲ್ಲಿ (ಇಂದಿಗೆ ಬೇಕೆನಿಸಿದ) ಹಲ ರಾಜಕೀಯ ತಂತ್ರಗಳ ಸೂಚಿಯಿದ್ದಂತಿದೆಯೆಂದು ತೋರುತ್ತದೆಯಲ್ಲವೇ ? ಭಾರತೀಯ ಸಪ್ತಕ್ಷೇತ್ರಗಳಲ್ಲಿ ಮಧುರೆಯಂತೆ ದ್ವಾರವತಿಯೂ ಪರಿಗಣಿತವಾಗಲು ಕೃಷ್ಣನ ವೈಮೆಯೇ ಕಾರಣವೆನ್ನಬಹುದು. (ಇನ್ನು ಮುಂದಿನ ಕತೆಯೇ 'ರುಕ್ಮಿಣಿಯ ಪುನರಾಹರಣ')

# ಸಾಹಿತ್ಯ ಸಂಶೋಧನ

## ಅಪೂರ್ವ ಷಟ್‌ಪದಿಯ ಇತಿವೃತ್ತ

ಶ್ರೀ ದೇಸಾಯಿ ಪಾಂಡುರಂಗರಾಯರು, ಎಂ.ಎ., ನೀಲಗಿರಿ.

'ಕನ್ನಡ ನುಡಿ'ಯ ಕಳೆದ ಫೆಬ್ರುವರಿ ಸಂಚಿಕೆಯಲ್ಲಿ 'ಒಂದು ಅಪೂರ್ವ ಷಟ್‌ಪದಿ' ಎಂಬ ಶೀರ್ಷಿಕೆಯಲ್ಲಿ ಒಂದು ಚಿಕ್ಕ ಲೇಖನವನ್ನು ಬರೆದು, ಅಮ್ಮಿನಭಾವಿಗ್ರಾಮದ ಒಂದು ಶಾಸನದಲ್ಲಿ ನನಗೆ ಗೋಚರವಾದ ಒಂದು ತ್ರುಟಿತ ಷಟ್‌ಪದಿ ಪದ್ಯವನ್ನು ಉದ್ಧರಿಸಿ, ಅದರ ಲಕ್ಷಣವನ್ನು ಸೂಚಿಸಿದೆನು. ಈ ಲೇಖನವು ಕೂಡಲೆ ನನ್ನ ಸಾಹಿತ್ಯಮಿತ್ರರ ಲಕ್ಷ್ಯವನ್ನು ಎಳೆದುಕೊಂಡಿತು. ಇದನ್ನು ಕುರಿತು ಚರ್ಚೆಯನ್ನು ನಡೆಸಿದ ಮೊದಲಿಗರು 'ಕರ್ಮವೀರ' ಪತ್ರಿಕೆಯ ಶ್ರೀ ಪಾ. ವೆಂಕಟರಮಣಾಚಾರ್ಯರು. ಬಳಿಕ ಶ್ರೀ ಡಿ. ಎಲ್. ನರಸಿಂಹಾಚಾರ್ ಅವರು ಈ ವಿಚಾರದಲ್ಲಿ ನನಗೆ ಎರಡು ಕಾಗದಗಳನ್ನು ಬರೆದರು. ಶ್ರೀ ಬೆಟಗೇರಿ ಕೃಷ್ಣಶರ್ಮರು ತಮ್ಮ 'ಜಯಂತಿ'ಯ ಜುಲೈ ಸಂಚಿಕೆಯಲ್ಲಿ ಈ ವಿಷಯವಾಗಿ ಕೆಲವು ವಿಚಾರಗಳನ್ನು ಪ್ರಕಟಿಸಿದರು. ಮುಂದೆ ಜುಲೈನಲ್ಲಿ ಹೊರಬಿದ್ದ 'ಕನ್ನಡ ನುಡಿ'ಯ ಮಾರ್ಚಿ–ಏಪ್ರಿಲ್ ಸಂಚಿಕೆಯಲ್ಲಿ ಶ್ರೀ ತೀ. ನಂ. ಶ್ರೀಕಂಠಯ್ಯನವರು ಸುದೀರ್ಘವಾದ ಲೇಖನವನ್ನು ಬರೆದು, 'ಅಪೂರ್ವ ಷಟ್‌ಪದಿ'ಯ ಜನ್ಮಕುಂಡಲಿಯನ್ನು ಗುಣಿಸಿ, ಜಾತಕ ಲಕ್ಷಣವನ್ನು ನಿರ್ಧರಿಸಿದರು. ಇಂತು ಅಹಮಹಮಿಕೆಯಿಂದ ಮುಂದು ಬಂದು ಈ ಚರ್ಚೆಯಲ್ಲಿ ಸಹಾಯ ಮಾಡಿದುದಕ್ಕಾಗಿ ಈ ಮಿತ್ರರಿಗೆ ನಾನು ಋಣಿಯಾಗಿದ್ದೇನೆ. ಈ ಬಗೆಯ ಕುತೂಹಲವನ್ನು ಕೆರಳಿಸಿದ 'ಅಪೂರ್ವ ಷಟ್‌ಪದಿಯ'ಯ ಇತಿವೃತ್ತವು ರಹಸ್ಯಮಯವಾಗಿರುವುದರಿಂದ ಅದನ್ನು ನಾನು ಮೊದಲು ನಿರೂಪಿಸಬೇಕಾಗಿದೆ. ಅನಂತರ ಇತರ ಕೆಲವು ವಿಚಾರಗಳನ್ನೂ ವಿವೇಚಿಸುವೆ.

ಅಮ್ಮಿನಭಾವಿಯ ಜೈನ ಬಸದಿಯಲ್ಲಿನ ಪ್ರಸ್ತುತ ಶಾಸನವನ್ನು ಭಾರತ ಪ್ರಭುತ್ವದ ಪುರಾತತ್ತ್ವವಿಭಾಗದ ಶಾಸನ ಸಂಶೋಧನ ಕಾರ್ಯಾಲಯದವರು ಕಳೆದ ೧೯೨೫–೨೬ ಈ ಕ್ರಿ. ವ. ದಲ್ಲಿ ಸಂಗ್ರಹಿಸಿದರು. ಮುಂಬಯಿ ಕರ್ನಾಟಕ ಶಾಸನಾವಳಿ ಎಂಬ ಗ್ರಂಥಮಾಲೆಯ ಒಂದನೆಯ ಸಂಪುಟದ ಎರಡನೆಯ ಭಾಗದಲ್ಲಿ (Bombay Karnatak Inscriptions, Vol. 1, part II) ಅದನ್ನು ಸೇರಿಸಲಾಗಿದೆ. ಅವಲೋಕಿಸುತ್ತಿರುವಾಗ ಈ ಶಾಸನದಲ್ಲಿಯ 'ಷಟ್‌ಪದ' ಎಂಬ ನಿರ್ದೇಶವು ನನ್ನ ಲಕ್ಷ್ಯವನ್ನು ಸೆಳೆದುಕೊಂಡಿತು. ಆದರೆ ಈ ಸ್ಥಳದಲ್ಲಿ ಶಾಸನ ಪಂಕ್ತಿಗಳು ಬಹುವಾಗಿ ಸವೆದು ಹೋದುದರಿಂದ ಪದ್ಯದ ಉಚಿತ ಸ್ವರೂಪವನ್ನು ಕಂಡುಹಿಡಿಯುವುದು ಸಾಧ್ಯವಿಲ್ಲವೆಂದು ಮೊದಲು ನನಗೆ ತೋರಿತು.

ದಿನಗಳು ಗತಿಸಿದುವು. ಒಬ್ಬ ಸ್ನೇಹಿತರ ಪ್ರೋತ್ಸಾಹನದಿಂದ, ನಾನು ಹಿಂದೊಮ್ಮೆ ಅಲ್ಪ ಪ್ರಮಾಣದಲ್ಲಿ ಸಂಗ್ರಹಿಸಿ ಅಲ್ಲಿಗೆ ನಿಲ್ಲಿಸಿದ್ದ, ಶಾಸನಗಳಲ್ಲಿಯ ಗದ್ಯಪದ್ಯ ಸಾಹಿತ್ಯಭಾಗಗಳನ್ನು ಆಯ್ದು, 'ಶಾಸನಚಂಪೂ' ಎಂಬುದಾಗಿ ಗ್ರಂಥರೂಪದಿಂದ ಪ್ರಕಟಗೊಳಿಸುವ ಕೆಲಸದಲ್ಲಿ ತೊಡಗಿದೆನು. ಈ ಗ್ರಂಥಕ್ಕೆ ವಿಸ್ತಾರವಾದ ಪೀಠಿಕೆಯನ್ನು ಬರೆಯುವ ಅಗತ್ಯ ತೋರಿತು. ಆಗ ಅಮ್ಮಿನಭಾವಿ ಶಾಸನದಲ್ಲಿಯ 'ಷಟ್‌ಪದ'ವನ್ನು ಸೂಕ್ಷ್ಮವಾಗಿ ಪರೀಕ್ಷಿಸುವ ಸಂದರ್ಭ ಉಂಟಾಯಿತು. ಅದನ್ನು ಕುರಿತು ವಿವರಿಸುವ ಮೊದಲು ಈ ಶಾಸನದ ಪೂರ್ವಾಪರ ಸಹಿತ ಹತ್ತು ಪಂಕ್ತಿಗಳನ್ನು ಯಥಾವತ್ತಾಗಿ ನನ್ನ ಪೂರ್ವಿಕರು ಓದಿ ನಿಲ್ಲಿಸಿದ ಯಥಾಸ್ಥಿತ ಪಾಠದಂತೆ ಇಲ್ಲಿ ಉದ್ಧರಿಸುವೆ.

### ಅಮ್ಮಿನಭಾವಿಯ ಶಾಸನಭಾಗ
### (ಪಂಕ್ತಿಗಳು ೧೮ ರಿಂದ ೨೭)

೧೮ — ‖ ನಿಜಕುಳತಿಲಕಂ ಪಾಪಬ್ರಜರಿಪು ಶಿವಧರ್ಮ್ಮ ನಿರ್ಮ್ಮಳಂ ‖ ಶಿವ ಪಾದಾಂಬುಜಭೃಗಂ. ಸು.

೧೯ . . ಸುಜನಜನಂ ತಾಳಿಮಯ್ಯನೆನೆ ಮೆಚ್ಚದರಾರ್ ‖ ವಾರವಧೂಜನಮಾರಂ ಮಾರಾನ್ತಕಪದ ಪ[ಯೋ]–

೨೦ . . . ನಮಳಂ ಕಾರುಣ್ಯಪರಂ ಧರ್ಮ್ಮಾಧಾರಂ ಬೀರಣ್ಣನನ್ಯ ವನಿತಾ ದೂ[ರಂ] ಗುಣಗಣನಿಳಯಂ ಧರ್ಮ್ಮ–

೨೧ . . . . . ಚಿತ್ತು ಸೌಚದಾಣ್ಮಂ. ಸುಜನಾಗ್ರಣಿಯೆನೆ ನೆಗರ್ದ್ದಂ ಸಲೆ ಧಾರಿಣಿ ತಳದೊಳೆ ಮಾಚಿಯ.

೨೨ ...... ನೀಪೇಳ್ದೀರ್ವ್ವರು ಮೂರಿಂ ತೆಂಕಲೊನ್ದು ಶಿವಗ್ರಿಹಮಂ ವಿಸ್ತರದಿಂ ಪಾಡಿಸಿ ಕುಂಭೇಸ್ವ . .

೨೩ ...... ಧರ್ಮ್ಮಜ್ಞರ್ ॥ ಷಟ್ಪದ ॥ ಹರಪಾದಾಂಬುಜಭೃಂಗಂ ಪರನಾರೀಜನದೂರಂ . . .

೨೪ ...... ಜಾತರೂಪಂ ಸರಸತಿಗಣ ಭಕ್ತ ನರಸ[ಿಂ]ಮ್ಮಂ ನೆಗರ್ದ್ದನೀ ಧರಗೆಲ್ಲಂ ಸಲಿಸೆ.

೨೫ . . . . ಸಂಸಾರಂ ಸಾರ ಮಲ್ತೆಂದ ಅಱಿದು ಮಾಗುಡ[ವೆ]ಯನೇಕ ಪ್ರತಿಮೆ[ಗಳಿ]ಂ ಮಾ .

೨೬ ...... ಕೆ[ಬಟ್ಟಿ] ಮಾಚ . . . ಅದಿ ॥ವ॥ ಸ್ವಸ್ತಿ ಸಕಕಾಲಂ ೯೫೩ ನೆಯ ವಿರೋಧ ಕ್ರಿತು ಸಂವ –

೨೭ . . . . . ಪಂಚಮಿಯೊಳಾದಿತ್ಯ ವಾರಮುಂ ವ್ಯತೀಪಾತಮುಂ ಕೂ[ಡಿ ಬ]ರಲ್ಕೆ ತತ್ಪುಣ್ಯದಿನದೊಳ್–

[ಸೂಚನೆ: ಮೇಲಿನ ಶಾಸನ ಪಂಕ್ತಿಗಳಲ್ಲಿ ಚೌಕು ಕಂಸದಲ್ಲಿ [ ] ಕಾಣಿಸಿದ ಅಕ್ಷರಗಳು ಮೂಲದಲ್ಲಿ ಸಾಕಷ್ಟು ಸ್ಫುಟವಾಗಿಲ್ಲ ಎಂದು ತಿಳಿಯಬೇಕು.]

ಈ ಶಾಸನ ಭಾಗವನ್ನು ಪರಿಶೀಲಿಸಿದರೆ ಈ ಸಂಗತಿಗಳು ಮನದರಿಕೆಯಾಗುತ್ತವೆ: ಒಂದನೆಯದು, 'ಷಟ್ಪದ' ಎಂದು ಉಕ್ತವಾದ ಭಾಗದ ಹಿಂದೆ ಕಂದ ಪದ್ಯಗಳು, ಮುಂದೆ ವಚನಗದ್ಯವು ಇದೆ. ಎರಡನೆಯದು, 'ಷಟ್ಪದ' ಎಂಬ ನಿರ್ದೇಶವಿರದೆ ಇದ್ದರೆ ಈ ಪಂಕ್ತಿಗಳಲ್ಲಿ ಷಟ್ಪದ ಪದ್ಯಗಳು ಅವಿತುಕೊಂಡಿವೆ ಎಂಬ ಸಂದೇಹವು ಕೂಡ ಬರುವುದು ಸಾಧ್ಯವಿರಲಿಲ್ಲ. ಹೆಚ್ಚು ಚಿಕಿತ್ಸೆ ಮಾಡಿದ್ದರೆ ಕಂದ ಪದ್ಯದ ಭಾಗಗಳಿವೆ ಎಂದು ಗುರುತಿಸಬಹುದಾಗಿತ್ತು. ಪಾದಗಳ ಮಾತಂತಿರಿ ಹಾಗಿರಲಿ; ಪದ್ಯಾಂತವನ್ನು ಸೂಚಿಸಲು ಒಂದು ರೇಖೆಯನ್ನಾದರೂ ವಿರಾಮಚಿನ್ಹೆಯಾಗಿ ಇಲ್ಲಿ ತೋರಿಸಿಲ್ಲ. ಮೂರನೆಯದು, 'ಧರೆಗೆಲ್ಲಂ' ಎಂಬುದಕ್ಕೆ ಒಂದು ಪದ್ಯವು ಸಮಾಪ್ತವಾಗುತ್ತದೆ ಎಂದು ಇಟ್ಟುಕೊಂಡರೆ, ಅದರ ಮುಂದೆ ಇನ್ನೊಂದು ಇದೇ ಜಾತಿಯ 'ಷಟ್ಪದ' ಪದ್ಯವಿರಬೇಕು, ಎಂದು ಸಂದೇಹಿಸಲು ಕಾರಣವಿದೆ. ಮೇಲಿನ ಪಾಠದಂತೆ ೨೧ನೆಯ ಪಂಕ್ತಿಯಲ್ಲಿ 'ಚಿತ್ತು' ಎಂಬುದು 'ಬಿತ್ತು' ಎಂದು ಇರಬೇಕಾಗಿತ್ತೆನೋ. ಇಂತಹ ಕೆಲ ಸಂದೇಹಗಳು ಉಂಟಾಗುತ್ತವೆ. ಅವುಗಳನ್ನು ತಿದ್ದುವ ಗೊಡವೆಗೆ ನಾನು ಹೋಗಿಲ್ಲ.

ಇದೀಗ ಎಂತಹ ಪರಿಸ್ಥಿತಿಯಲ್ಲಿ 'ಅಪೂರ್ವ ಷಟ್ಪದಿ'ಯನ್ನು ನಾನು ಗುರುತಿಸಿದೆನು ಎಂಬ ವಿಚಾರವು ಮಿತ್ರರಿಗೆ ಗೋಚರವಾದೀತು. ಈ ಕೆಲಸದಲ್ಲಿ ದ್ವಿತೀಯಾಕ್ಷರ ಪ್ರಾಸವು ನನಗೆ ನೆರವಾಯಿತು. ಅದರ ಬಲದಿಂದ ಆರು ಪಾದಗಳನ್ನು ಕಲ್ಪಿಸಿ ಒಂದು ಷಟ್ಪದಿ ಪದ್ಯವಾಗಿ ಎತ್ತಿ ತೋರಿಸಿದೆನು.

ಷಟ್ಪದಿಯ ಚರಿತ್ರೆ ನಾಗವರ್ಮನ ಕಾಲಕ್ಕಿಂತ ಹಿಂದೆ ಹೋಗುತ್ತದೆ. ನಾಗವರ್ಮನು 'ಕರ್ಣಾಟಕ ವಿಷಯ ಜಾತಿ'ಯಲ್ಲಿ ತ್ರಿಪದಿಯಂತೆ, ದೇವಗಣ ಇಲ್ಲದೆ ಅಂಶಗಣಗಳಿಂದ ಘಟಿತವಾದ ಷಟ್ಪದಿಯನ್ನು ಲಕ್ಷಿಸಿದ್ದಾನೆ ಎಂಬುದು ನಿಜ. ಆದರೆ ಈಚೆಗೆ ಮಾತ್ರಾಗಣದ ಪ್ರಭಾವವು ಹೆಚ್ಚಿ, ತ್ರಿಪದಿ, ಸಾಂಗತ್ಯ, ಷಟ್ಪದಿ ಮೊದಲಾದ ವೃತ್ತಗಳನ್ನು ಮಾತ್ರಾ ವೃತ್ತಗಳಾಗಿ ಎಣಿಸಿ ಅವುಗಳ ಲಕ್ಷಣವನ್ನು ಪ್ರತಿಪಾದಿಸುವ ಸಂಪ್ರದಾಯವು ಪ್ರಚಲಿತವಾಗಿದೆ.[೧] ಸ್ವಾಭಾವಿಕವಾಗಿ ಮಾತ್ರೆಯ ಈ ಪ್ರಚಲಿತ ಮಾನದಂಡದಿಂದ ಅಮ್ಮಿನಭಾವಿಯ 'ಷಟ್ಪದ'ವನ್ನು ನಾನು ಅಳೆದು ನೋಡಿದೆನು. ಒಂದೆರಡು ಕಡೆಗಳಲ್ಲಲ್ಲದೆ ಮಿಕ್ಕೆಡೆಗಳಲ್ಲಿ ಅದು ಶರಷಟ್ಪದಿಯ ನಾಲ್ಕು ಮಾತ್ರಾನಿಯಮವನ್ನು ಅನುಸರಿಸುವಂತೆ ತೋರಿತು. ನಾನು ಕೊಟ್ಟ ಈ ಷಟ್ಪದಿಯ ಈ ಪಾಠವನ್ನು ಈಗಾಗಲೆ ಎಲ್ಲ ಲೇಖಕರು ತಮ್ಮ ಬರವಣಿಗೆಗಳಲ್ಲಿ ಹಲವು ಬಾರಿ ಉದಾಹರಿಸಿದ್ದಾರೆ. ಆದರೆ ಶಾಸನದಲ್ಲಿಯ ಮೇಲೆ ತೋರಿಸಿದ ಮೂಲಪಾಠದಂತೆ ಆದರ ೫ನೆಯ ಪಾದವು 'ಸರಸತಿಗಣಭಕ್ತ' ಎಂಬುದಾಗಿ ಮಾತ್ರ ಇದೆ. ('ಭಕ್ತಂ' ಎಂದಿಲ್ಲ) ಎಂಬ ತಿದ್ದುಪಡೆಯನ್ನು ಲಕ್ಷಿಸಬೇಕಾದುದು.

ಇನ್ನು ಈ 'ಷಟ್ಪದ'ದ ಕುಲಗೋತ್ರ ವಿಚಾರ. ಚಾರಿತ್ರಕ ಹಿನ್ನೆಲೆ ಮತ್ತು ಸ್ವರೂಪ ಲಕ್ಷಣಗಳನ್ನು ವಿಮರ್ಶಿಸಿದರೆ ಇದರ ಸಂಬಂಧವನ್ನು ಈಚೆಯ ಕಾಲದ ನಾಲ್ಕು ಮಾತ್ರೆಯ ಶರಷಟ್ಪದಿಯೊಡನೆ ಸೂಚಿಸುವುದು ಯುಕ್ತವಾಗಲಿಕ್ಕಿಲ್ಲ. ಈ ಸಂದರ್ಭದಲ್ಲಿ 'ಕರ್ಮವೀರ'ದ ಶ್ರೀ ವೆಂಕಟರಮಣಾಚಾರ್ಯರ ಸೂಚನೆಯನ್ನೂ[೨] ಪರಾಮರ್ಶಿಸಬಹುದು.

---

೧ ದಿವಂಗತ ಬಿ. ಎಂ. ಶ್ರೀಕಂಠಯ್ಯನವರ ನೇತೃತ್ವದಲ್ಲಿಯೇ ಪ್ರಕಟವಾದ 'ಕನ್ನಡ ಕೈಪಿಡಿ'ಯ ಪ್ರಥಮ ಮುದ್ರಣ, ಪುಟ ೧೭೫, ೧೩೨, ಇ.; ಕ. ಸಾ. ಪ. ಪತ್ರಿಕೆಯ ೧೯೪೨, ಜೂನ್ ಸಂಚಿಕೆಯಲ್ಲಿಯ ಶ್ರೀ ಕುಂದಣಗಾರರ 'ಷಟ್ಪದಿಕಾರ-ರಾಘವಾಂಕ' ಎಂಬ ಲೇಖನ; ಇ.

೨ ಕರ್ಮವೀರ, ೧೭ ಮಾರ್ಚ ೧೯೫೨, ಪು. ೧೧.

ಶ್ರೀಯುತರು ಇದೊಂದು ಆರ್ಯಾಪ್ರಭೇದವೆಂದು ಹೇಳಿದ್ದಾರೆ. ಈ ಸೂಚನೆ ಕುತೂಹಲ ಪೂರ್ಣವಾಗಿದ್ದರೂ ಇಂತಹ ಬೇರೆ ಉದಾಹರಣೆಗಳು ಕನ್ನಡ ಸಾಹಿತ್ಯದಲ್ಲಿ ಇದುವರೆಗೆ ದೊರೆತಿಲ್ಲವಾದುದರಿಂದಲೂ ಅನ್ಯರೀತಿಯಿಂದ ಇದರ ಕುಲಗೋತ್ರವನ್ನು ಕಂಡು ಹಿಡಿಯುವುದು ಉಚಿತವಾಗಿರುವುದರಿಂದಲೂ ಸದ್ಯದಲ್ಲಿ ಈ ವಿಚಾರವನ್ನು ಆಚೆಗೆ ಇರಿಸಬಹುದು.

ದೇವಗಣ ನಿಯತವಾದ ನಾಗವರ್ಮನ ಷಟ್‌ಪದಿಯಂತಹ ಇನ್ನೂ ಕೆಲ ಪದ್ಯಗಳು ಮಾತ್ರಾಗಣಕ್ಕೂ ಸರಿಹೋದುದರಿಂದ ಷಟ್‌ಪದಿರಚನೆಯಲ್ಲಿ ಸಂದಿಗ್ಧತೆ ಮತ್ತು ಸಂಕೀರ್ಣತೆ ಉಂಟಾಗಿ ಮಾತ್ರಾನಿಯಮಕ್ಕೆ ಪ್ರಶಸ್ತಿ ಏರ್ಪಟ್ಟಿರಬೇಕು. ಇದಕ್ಕೆ ನಾಗವರ್ಮನ 'ಮಂದರಧರಗಣಮೊಂದಿರೆ ಕಡೆಯೊಳ್–' ಎಂಬ ಪದ್ಯದಂತೆ 'ಅಂಗನೃಪಾಯತಿ ತುಂಗಭುಜಂ–' ಎಂಬ ಚಂದ್ರರಾಜನ 'ಮದನತಿಲಕ'ದಲ್ಲಿಯ ಪದ್ಯವನ್ನು ಉದಾಹರಣೆಯಾಗಿ ಹೇಳಬಹುದು. ಆದರೆ ಈ ಮಾತ್ರಾನಿಯಮಕ್ಕೆ ಒಳಗಾಗದ ರಚನೆಗಳಾದರೂ ತತ್ಕಾಲದಲ್ಲಿ ಇದ್ದಿರಬೇಕು ಎಂಬ ಅಂಶವು 'ಸುಕುಮಾರ ಚರಿತ'ದಲ್ಲಿಯ 'ಅದು ಪರಮಾಸ್ಪದ ಮದು ಪುಣ್ಯಸಂಪದ–' ಎಂಬ ಪದ್ಯದಿಂದ ಗೋಚರವಾಗುತ್ತದೆ.

ಅಮ್ಮಿನಭಾವಿ ಶಾಸನದ 'ಷಟ್‌ಪದ'ವನ್ನು ದೇವಗಣದ ಷಟ್‌ಪದಿಯಾಗಿ ಭಾವಿಸಲಿಕ್ಕೆ ಕೆಲವು ಆತಂಕಗಳು ಇಲ್ಲದೆ ಇಲ್ಲ. ಆದರೆ ಅವು ಅನಿವಾರ್ಯವಲ್ಲವೆಂದು ಹೇಳಬಹುದು. ಆರನೆಯ ಪಾದದಲ್ಲಿಯ ಕೊನೆಯ ಪದ 'ಧರೆಗೆಲ್ಲಂ' ಎಂಬುದು ವಿಷ್ಣುಗಣವಾಗುತ್ತದೆ, ಅಲ್ಲಿ ಇರಬೇಕಾದುದು ರುದ್ರಗಣ. ಅದಕ್ಕಾಗಿ 'ಧರಣಿಗೆಲ್ಲಂ, ಧಾತ್ರಿಗೆಲ್ಲಂ' ಎಂಬುದಾಗಿ ತಿದ್ದುಪಡೆಯನ್ನು ಸೂಚಿಸಲಾಗಿದೆ. ಆದರೆ ಇಂತಹ ತಿದ್ದುಪಡೆಯ ಅಗತ್ಯವನ್ನು ಅಪೇಕ್ಷಿಸದೆ ಲಯಾನುವರ್ತಿಯಾಗಿ 'ಧ' ಎಂಬ ಅಕ್ಷರವನ್ನು ಎಳೆದು 'ಧಾ' ಎಂಬಂತೆ ಉಚ್ಚರಿಸಿದರೆ (ಶ್ರೀ ಡಿ. ಎಲ್. ನ. ಇವರ ಸೂಚನೆ), ಈ ಬಾಧಕವು ದೂರವಾಗುತ್ತದೆ. ನಾಲ್ಕನೆಯ ಪಾದದಲ್ಲಿಯ 'ಜಾತರೂಪಂ' ಎಂಬ ಪದವು ಹೆಚ್ಚಿನ ಬಾಧಕವುಳ್ಳುದು. ಇದರ ಮೊದಲಕ್ಕರ ವಾಚನದಲ್ಲಿ ತಪ್ಪಾಗಿರಬೇಕು ಎಂದು ಸುಮ್ಮನೆ ಹೇಗೆ ಹೇಳುವುದು? ನಾಗವರ್ಮನ ಎರಡು ವಿಷ್ಣುಗಣಗಳ ನಿಯಮವನ್ನು ಅನುಸರಿಸಬೇಕೆಂದು, ಊಹಿಸುವುದಾದರೆ ಈ ಸಮಗ್ರ ಪಾದವನ್ನು ಹೀಗೆ ಎತ್ತಿ ತೋರಿಸಬಹುದು; 'ಸರಸನೂರ್ಜಿತ ರೂಪಂ' ಇಂತು ಪುನರ್ವಿಮರ್ಶಿಸಿ ಈ ಪದ್ಯವನ್ನು ಹೀಗೆ ರಚಿಸಬಹುದು:

ಹರ ಪಾದಾಂಬುಜ ಭೃಂಗಂ
ಪರ ನಾರೀ ಜನ ದೂರಂ
. . . . . . . . . . .
[ಸರಸನೂರ್ಜಿ]ತ ರೂಪಂ
ಸರಸತಿ ಗಣಭಕ್ತ
ನರಸಮ್ಮಂ ನೆಗರ್ದನೀ ಧರೆಗೆಲ್ಲಂ ॥

[ ] = ಊಹಿಸಿದ ಅಕ್ಷರಗಳು.



ಈ ಪಾಠದಂತೆ ಈ ಪದ್ಯದಲ್ಲಿ ವರ್ಣಿತನಾದ ವ್ಯಕ್ತಿಯ ಹೆಸರು ನರಸಮ್ಮ ಇಲ್ಲವೆ ಅರಸಮ್ಮ ('ಅರಸಪ್ಪ' ಎಂದ ಹಾಗೆ) ಎಂದಾಗುತ್ತವೆ.

ಮೇಲಿನ ಪದ್ಯದ ೫ನೆಯ ಪಾದದಲ್ಲಿ ಬರುವ 'ಸರಸತಿಗಣಭಕ್ತ' ಎಂಬ ಮಾತಿಗೆ ಸರಿಯಾದ ಅರ್ಥ ಆಗುವುದಿಲ್ಲವೆಂದು, ಈ ಪದಪಾಠವು ತಪ್ಪಾಗಿರಬಹುದೇ? ಎಂದು ಶ್ರೀ ಶ್ರೀಕಂಠಯ್ಯನವರು ಸಂದೇಹವನ್ನು ವ್ಯಕ್ತಗೊಳಿಸಿದ್ದಾರೆ. ಈ ಸಂದೇಹಕ್ಕೆ ಏನೂ ಅವಕಾಶವಿಲ್ಲವೆಂದು ತೋರಿಸಬಹುದು. ಅದು ಹೀಗೆ:

ಶಾಸನ ಸಾಹಿತ್ಯದಲ್ಲಿ 'ಸರಸತಿಗಣಮಿತ್ರ, ಸರಸತಿಗಣಭಕ್ತ' ಎಂಬಂತಹ ಅನೇಕ ಪ್ರಯೋಗಗಳು ಸಿಕ್ಕುತ್ತವೆ. ಇಂತಹ ವಿಶಿಷ್ಟ ಪದಗಳು ಸಾಮಾನ್ಯವಾಗಿ ವಾಸ್ತು–ಶಿಲ್ಪ, ಮೂರ್ತಿಶಿಲ್ಪ, ಚಿತ್ರಶಿಲ್ಪ, ಮೊದಲಾದ ಕಲೆಗಳಲ್ಲಿ ಅಭಿಜ್ಞರಾದ ಶಿಲ್ಪಿಗಳನ್ನು ಅನ್ವಯಿಸುತ್ತವೆ. ಇಂತಹ ಶಿಲ್ಪಿಗಳನ್ನು ಓಜ, ರೂವಾರಿ, ಸೂತ್ರಧಾರಿ, ಕಲ್ಕುಟಿಗ, ಮೊದಲಾಗಿ ಸಂಬೋಧಿಸುವುದುಂಟು. ಈ ಶಿಲ್ಪಿಗಳು ನೈಜ ಕಲೋಪಾಸಕರಾಗಿದ್ದುದರಿಂದಲೂ ಕಲೆಗಳ ಅಧಿದೇವತೆ ಸರಸ್ವತಿಯಾಗಿರುವುದರಿಂದಲೂ ಅವರು ತಮ್ಮನ್ನು 'ಸರಸತಿಗಣಭಕ್ತ' ಮುಂತಾಗಿ ವರ್ಣಿಸಿಕೊಳ್ಳುವುದು ಸಮುಚಿತವೇ ಸೈ. ಮೇಲೆ ನಿರ್ದೇಶಿಸಿದ ಪದಗಳ ಜೊತೆಗೆ 'ಸರಸತಿಗಣದಾಸಿ' ಎಂಬ ಪುರುಷವಾಚಕ ಪದವು ಹೆಚ್ಚಾಗಿ ಪ್ರಯುಕ್ತವಾದಂತೆ ಗೋಚರವಾಗುತ್ತದೆ. 'ಸರಸತಿಗಣದಾಸಿ' ಎಂದರೆ ಸರಸ್ವತಿಯ ಪರಿವಾರದವರ ತೊತ್ತು.

ಮುಳ್ಗುಂದದ ನಗರೇಶ್ವರ ದೇವಾಲಯದ ಹಿಂಬ

ದಿಯಲ್ಲಿ ನಿಲ್ಲಿಸಿದ ಶಾಸನದಲ್ಲಿ[೩] 'ಸರಸ್ವತೀಗಣದ ದಾಸಿ', ನಾಗವರ್ಮನ ಛಾತ್ರ, ಪುರಿಕರ ನಗರದ ಬಮ್ಮನು ಆ ಶಾಸನವನ್ನು ಕಂಡರಿಸಿದಂತೆ ಹೇಳಿದೆ. ಬಳ್ಳಾರಿ ಜಿಲ್ಲೆಯ ಕೋತನಕಲ್ಲು ಗ್ರಾಮದ ಒಂದು ಶಾಸನವನ್ನು[೪] ಕಂಡರಿಸಿದವನು 'ಸರಸ್ವತೀದೇವಿಯ ವರ ಪ್ರಸಾದ'ವನ್ನು ಪಡೆದ, ಸೂರಿಲ್ಲಿಯ ಇಂದೋಜನ ಪುತ್ರ ಚೌವೋಜ—'ನೂಱುಪ್ಪದಿಂಬರ ತೊತ್ತು.' ಧಾರವಾಡ ಜಿಲ್ಲೆಯ, ರೋಣ ತಾಲೂಕಿನ ಬೆಳವಣಕಿ ಗ್ರಾಮದ ಒಂದು ಶಾಸನವನ್ನು ಕಂಡರಸಿದ ತೈಲನೆಂಬಾತನನ್ನು 'ಸರಸತಿಗಣಮಿತ್ರ, ಪರನಾರೀಪುತ್ರ, ಎಣ್ಭತ್ತನಾಲ್ವರ (೮೪) ವಿದ್ಯಾವಂತ, ಸೂತ್ರಧಾರಿ' ಎಂದು ವರ್ಣಿಸಿದೆ. ಇಂತಹ ಅನೇಕ ಉದಾಹರಣೆಗಳನ್ನು ಎತ್ತಿ ತೋರಿಸಬಹುದು. ಆದರೆ ಈ ವಿಷಯವು ಇಲ್ಲಿ ಆನುಷಂಗಿಕವಾಗಿರುವುದರಿಂದ ಇದನ್ನು ಹೆಚ್ಚಿಗೆ ಬೆಳೆಸುವುದಿಲ್ಲ. ಇಂತಹ ಶಿಲ್ಪಿಗಳ ಒಂದು ವರ್ಗವೇ ಆ ಕಾಲದಲ್ಲಿ ಏರ್ಪಟ್ಟಿದ್ದಿತು. ಈ ವರ್ಗದವರು ಹೇಗೆ ಕುಲರಸಿಕರೂ ಬಹುಕಲಾಕೋವಿದರೂ ಆಗಿದ್ದರು ಎಂಬುದನ್ನು ವಿಶದಗೊಳಿಸಲು ಮಾತ್ರ ಒಂದು ಶಾಸನಸ್ಥ ಪದ್ಯವನ್ನು ಉದಾಹರಿಸುವೆ:

ರಸಭಾವಾಭಿನಯಂಗಳ
ಪೊಸದೇಸಿಯ ಚಿತ್ರಯುದ್ಧ ನಾಟಕ ಬೆಸನಂ
ಪೆಸರೊಳು ದೇವಂಗೇರಿಯೊ –
ಳೆಸೆವಿರ್ಪಾ ಕಾಳಿದಾಸನೊರ್ವನೆ ಬಲ್ಲ॥

ಧಾರವಾಡ ಜಿಲ್ಲೆಯ ಹಾನಗಲ್ ತಾಲೂಕಿನ ಅರಳೇಶ್ವರ ಗ್ರಾಮದ ಕದಂಬೇಶ್ವರ ದೇವಾಲಯದ ಮಕರತೋರಣದ ಮುಂಭಾಗದಲ್ಲಿ ಮೇಲಣ ಪದ್ಯವನ್ನು ಬಹುಸುಂದರ ಅಕ್ಷರಗಳಿಂದ ಕೆತ್ತಿದೆ.[೫] ಇದರಲ್ಲಿ ಕಲಾಭಿಜ್ಞನಾದ ಕಾಳಿದಾಸ ಎಂಬವನನ್ನು ವರ್ಣಿಸಿದೆ. ಈತನು ಆ ದೇವಾಲಯವನ್ನು ನಿರ್ಮಿಸಿದ ಶಿಲ್ಪಿಯೂ ಅದರ ಮಕರತೋರಣದ ಮೇಲಿನ ಸುದೀರ್ಘ ಶಾಸನವನ್ನು ಮನೋಹರವಾಗಿ ಕಂಡರಿಸಿದ ಕಲ್ಕುಟಿಗನೂ ಕಾವ್ಯಾದಿ ಕಲಾಮರ್ಮಜ್ಞನೂ ಆಗಿದ್ದನೆಂದು ಗೋಚರವಾಗುತ್ತದೆ. ಈತನು ಹಾವೇರಿ ತಾಲೂಕಿನಲ್ಲಿಯ ದೇವಗಿರಿ ಗ್ರಾಮದವನಾಗಿರಬೇಕು. ಅಮ್ಮಿನಭಾವಿ ಶಾಸನದ ಅರಸಮ್ಮನಾದರೂ ಇಂತಹ 'ಸರಸತಿ ಗಣಭಕ್ತ' ವರ್ಗಕ್ಕೆ ಸೇರಿದ ಗಣ್ಯ ಕಲಾವಿದನಾಗಿದ್ದನೆಂದು ಇಟ್ಟುಕೊಳ್ಳಬಹುದು.

ಕನ್ನಡ ಸಾಹಿತ್ಯ ಮತ್ತು ಶಾಸನವಾಙ್ಮಯ ಚರಿತ್ರೆಯಲ್ಲಿ ಅಮ್ಮಿನಭಾವಿ ಶಾಸನದಲ್ಲಿಯ 'ಷಟ್‌ಪದ' ಗಣ್ಯವಾದ ಸ್ಥಾನಕ್ಕೆ ಅರ್ಹವಾಗುತ್ತದೆ. ಒಂದನೆಯದಾಗಿ, ದೇವಗಣನಿಯತವಾದ 'ಷಟ್‌ಪದ' ಕೃತಿಯ ಉದಾಹರಣೆಗಳು ಅತ್ಯಲ್ಪವಾಗಿರುವುದರಿಂದ ಇದರ ಬೆಲೆ ಹೆಚ್ಚುತ್ತದೆ. ಎರಡನೆಯದಾಗಿ, ಶಾಸನವಾಙ್ಮಯದಲ್ಲಿ ಷಟ್‌ಪದಿ ಕಾಣಿಸಿಕೊಳ್ಳುವುದು ವಿರಲ. ಹರಿಹರದ ಒಂದು ಶಾಸನದಲ್ಲಿ[೬] ಪೋಲಾಳ್ವ ದಂಡನಾಯಕನು 'ಷಟ್‌ಪದ' ವೃತ್ತದಲ್ಲಿ 'ಹರಚಾರಿತ್ರ' ಎಂಬ ಕೃತಿಯನ್ನು ರಚಿಸಿದಂತೆ ಹೇಳಿದ್ದರೂ ಆ ರಚನೆಯ ವಿವರಗಳು ಉಪಲಬ್ಧವಾಗಿಲ್ಲ. ಈ ಶಾಸನ ಕಾಲ ಕ್ರಿ. ಶ. ೧೨೨೪. ನನಗೆ ತಿಳಿದ ಮಟ್ಟಿಗೆ ಶಾಸನವಾಙ್ಮಯದಲ್ಲಿ 'ಷಟ್‌ಪದ' ರಚನೆಯ ಮೊತ್ತ ಮೊದಲಿನ ಉದಾಹರಣೆಯಿದು. ಇದರ ಕಾಲವು ಸಾಕಷ್ಟು ಪ್ರಾಚೀನವಾಗಿರುವುದರಿಂದ ಇದು ಮಹತ್ತ್ವಪೂರ್ಣವಾಗಿದೆ.

'ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯ' ೧೯೪೬ ಜೂನ್ ಸಂಚಿಕೆಯಲ್ಲಿ ಪ್ರಕಟವಾದ 'ಶಾಸನ ಮತ್ತು ಸಾಹಿತ್ಯ' ಎಂಬ ಲೇಖನದಲ್ಲಿ, ನಮ್ಮ ಸಾಹಿತ್ಯಾಭ್ಯಾಸದಲ್ಲಿ ಶಾಸನ ವಾಙ್ಮಯದಿಂದ ಹೇಗೆ ಸಹಾಯವು ದೊರೆಯುತ್ತದೆ, ತ್ರಿಪದಿಯೇ ಮೊದಲಾದ ದೇಸಿಯ ರಚನೆಯ ಶಾಸನಸ್ಥ ಉದಾಹರಣೆಗಳಿಂದ ನಮ್ಮ ಸಾಹಿತ್ಯ ಚರಿತ್ರೆಯನ್ನು ನಾವು ಯಾವ ವಿಧವಾಗಿ ರೂಪಿಸಿಕೊಳ್ಳಬಹುದು, ಮುಂತಾದ ವಿಷಯಗಳನ್ನು ಚರ್ಚಿಸಿದ್ದೇನೆ. ಅಲ್ಲಿ ನಾನು ಪ್ರತಿಪಾದಿಸಿದ ಪ್ರಮೇಯಗಳಿಗೆ ಅಮ್ಮಿನಭಾವಿ ಶಾಸನದ 'ಷಟ್‌ಪದ'ದಿಂದ ಪೋಷಣೆ ದೊರೆಯುತ್ತದೆ.

---

[೩] Bombay Karnatak Inscriptions, Vol. I, part I, No. 97.

[೪] South Indian Inscriptions, Vol. I, part I, No. 372.

[೫] ಈ ಪದ್ಯವನ್ನು ನಾನು ಸಂಗ್ರಹಿಸಿದ ವಿಷಯ ನನ್ನ ಕಾರ್ಯಕಲಾಪಗಳಲ್ಲಿ ಸ್ಮರಣೀಯವಾದ ಒಂದು ಅಂಶ. ಅಂದು ಆ ಗ್ರಾಮಕ್ಕೆ ನಾನು ಮಧ್ಯಾಹ್ನದ ಉರಿಬಿಸಿಲಲ್ಲಿ ಹೋದೆನು. ಮುಂದೆ ಸಾಯಂಕಾಲದವರೆಗೆ ಊಟದ ವ್ಯವಸ್ಥೆ ಆಗಲಿಲ್ಲ. ಇಂತಹ ಬುಭುಕ್ಷಿತ ಸ್ಥಿತಿಯಲ್ಲಿ ಆ ಶಾಸನವನ್ನು ಓದುತ್ತ ಓದುತ್ತ ನನಗೆ ಶ್ರಮಪರಿಹಾರವೂ ತೃಪ್ತಿಯೂ ಉಂಟಾಯಿತು.

[೬] Epigraphia Carnatica, Vol XI, Davangere 25.

ಈ ಸಂದರ್ಭದಲ್ಲಿ ಶ್ರೀ ಶ್ರೀಕಂಠಯ್ಯನವರು ಉಪಯುಕ್ತವಾದ ಒಂದು ಸೂಚನೆಯನ್ನು ಮಾಡಿದ್ದಾರೆ. ಅದು ಹೀಗೆ: ಪ್ರಾಚೀನವೂ ಅಂಶಗಣ ವಿನ್ಯಾಸದಿಂದ ತನ್ನದೇ ಆದ ವೈಶಿಷ್ಟ್ಯವುಳ್ಳುವೂ ಆಗಿರುವ ಇಂತಹ ರಚನೆಗಳಿಗೆ 'ಷಟ್ಪದ' ಎಂಬ ನಾಮಾಂಕಿತವನ್ನು ಮೀಸಲಾಗಿರಿಸಿ, ಈಚೆಯ ಶರ ಕುಸುಮಾದಿ ಮಾತ್ರಾಗಣದ ರಚನೆಗಳಿಗೆ 'ಷಟ್ಪದಿ' ಎಂಬ ನಾಮಕರಣವನ್ನು ನಮ್ಮ ಸಾಹಿತ್ಯ ವಿಮರ್ಶೆಯಲ್ಲಿ ರೂಢಿಸುವುದು ಯುಕ್ತವು. ಈ ಸೂಚನೆಯನ್ನು ನಾನು ಪುರಸ್ಕರಿಸುತ್ತೇನೆ.

ಅಮ್ಮಿನ ಭಾವಿಯ 'ಷಟ್ಪದ'ವನ್ನು ನಾನೊಂದು ವಿಚಾರದಿಂದ ಅಪೂರ್ವವೆಂದು ಕರೆದೆನು.[೭] ಅದನ್ನು ಕುರಿತು ಬರೆದ ಮಿತ್ರರೆಲ್ಲರು ಅದರ ಅಪೂರ್ವತೆಯನ್ನು ಅಲ್ಲಗಳೆಯುತ್ತ ಇನ್ನೊಂದು ವಿಧದಿಂದ ಅದರ ಅಪೂರ್ವತೆಯನ್ನು ಪ್ರತಿಪಾದಿಸುವವರಾದರು. ಅನ್ಯ ವಿಚಾರಗಳಿಂದ ಅದರ ಅಪೂರ್ವತೆಯನ್ನು ನಾನು ಈ ಮೇಲೆ ಪುನಃ ವಿವೇಚಿಸಿದ್ದೇನೆ. ಈ ಸಂದರ್ಭದಲ್ಲಿ ಭೋಜರಾಜನ ಆಸ್ಥಾನದಲ್ಲಿ ಹೊಸ ಕವಿತೆಯನ್ನು ಹೊಸದಲ್ಲವೆಂದು ಅಂದು ತೋರಿಸುವ ಏಕಪಾಠಿ–ದ್ವಿಪಾಠಿ–ತ್ರಿಪಾಠಿ ಪಂಡಿತರ ಕಥೆ ಜ್ಞಾಪಕಕ್ಕೆ ಬರುತ್ತದೆ. ಅದರಿಂದ ಭೋಜರಾಜನ ಆಸ್ಥಾನ ಕವಿಗಳ ಪಾಂಡಿತ್ಯ ಪ್ರತಿಭೆ ಪ್ರಕಟವಾದಂತೆ, ಇಲ್ಲಿ ನಮ್ಮ ಕನ್ನಡ ಶಾರದೆಯ ಪರಿಸರದಲ್ಲಿಯ ಸಾಹಿತ್ಯಾಭ್ಯಾಸಿಗಳ ವಿದ್ವಾಪ್ರೌಢಿಮೆ ನಿದರ್ಶನಕ್ಕೆ ಬರುತ್ತಿದೆ. ವಿದ್ಯಾವಿಜಯವು ಸಾರಸ್ವತ ಪ್ರಪಂಚದಲ್ಲಿ ಅಭಿನಂದನೀಯ ಸಂನಿವೇಶವಲ್ಲವೆ ?

---

೭ ಈ ಶಾಸನವನ್ನು ಇನ್ನೊಮ್ಮೆ ಪರಿಶೀಲಿಸಿ ಸಾಧ್ಯವಾದರೆ ಶಿಲೆಯ ಮೇಲಿಂದ ಅದರ ಯಥಾಸ್ಥಿತ ಮೂಲ ಪಾಠವನ್ನು ಕಂಡು ಹಿಡಿಯಬೇಕೆಂದು ಇಟ್ಟುಕೊಂಡಿದ್ದೇನೆ. ಈ ನನ್ನ ಪ್ರಯತ್ನವು ಎಷ್ಟರ ಮಟ್ಟಿಗೆ ಯಶಸ್ವಿಯಾದೀತೋ ಹೇಳಲಾರೆನು. ಏಕೆಂದರೆ ಶಾಸನವು ಬಹುವಾಗಿ ಸವೆದಿದ್ದಂತೆ ತೋರುತ್ತದೆ.

## ವಿನಯ

ಬೆಟ್ಟತುದಿಯನ್ನೇರಿ ಅಲ್ಲಿ ನಿಂತನ ಕಂಡು
ತಪ್ಪಲಿನಲಿಹ ಮನುಜ ಭ್ರಾಂತಿಗೊಂಡು
ಹೊಟ್ಟೆಯುರಿಯಿಂದ ತಾನವಗೆ ಸರಿ ನಿಂತನೆನೆ
ಏರಿದಂತಾಯ್ತೆ ?– ಜನ ನಗರೆ ಕಂಡು ?




ಮೇಲೇರಿದರಿಗೆ ಮನ್ನಣೆಯ ಕಾಣಿಕೆ ಕೊಟ್ಟು
ಯತ್ನಗೈಯುವರೊಡನೆ ಸರಿನಿಲ್ಲಲು ;
ಕಾಲಬಲವೊಯ್ಯೆ ನೀನವರ ಮೀರಿಸಬಹುದು :
ವಿನಯ–ಪ್ರಯತ್ನ ಸಿದ್ಧಿಗೆ ಮೆಟ್ಟಲು.

## ಸೆತ್ತೆ - ಮುತ್ತು

ಅಂಬುಧಿ ತರಂಗರಂಗದಿ ಕುಣಿದು ನಲಿಯುತ್ತ
ಮೆರೆವುದಾವುದು ?–ಬುರುಗು ಪಾಚಿ ಸೆತ್ತೆ !
ತುಂಬಿರುವ ಮುತ್ತುರತ್ನಗಳು ಕಡಲಾಳದಲಿ
ಹುದುಗಿ, ದೊರೆವುವು ಮುಳಿಗಿದವರಿಗಲ್ತೆ !

—ಶ್ರೀ ರಾಘವ

# ಕನ್ನಡ ಸಾಹಿತ್ಯ ಪರಿಷತ್ತಿನ ಮಾನಪತ್ರ ಸಮರ್ಪಣ ಮಹೋತ್ಸವ.

ಭಾನುವಾರ, ೯-೧೧-೧೯೫೨

## ಸಂಗ್ರಹ ವರದಿ

ತಾ॥ ೯-೧೧-೧೯೫೨ನೆಯ ಭಾನುವಾರ ಸಂಜೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಸುಪ್ರಸಿದ್ಧ ವಿದ್ವಾಂಸರುಗಳಾದ ಆಸ್ಥಾನ ಮಹಾವಿದ್ವಾನ್ ಶ್ರೀ ನಂಜನಗೂಡು ಶ್ರೀಕಂಠಶಾಸ್ತ್ರಿಗಳವರಿಗೂ ಧಾರವಾಡದ ಶ್ರೀಮಾನ್ ವೀರಭದ್ರಪ್ಪ ಹಾಲಬಾವಿ, ಬಿ. ಎ., ಎಲ್‌ಎಲ್.ಬಿ., ಅವರಿಗೂ ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಮಾನಪತ್ರ ಸಮರ್ಪಣ ಮಹೋತ್ಸವವನ್ನು ಏರ್ಪಡಿಸಲಾಗಿತ್ತು. ನಗರದ ಅನೇಕ ಗಣ್ಯವ್ಯಕ್ತಿಗಳೂ ಸಾಹಿತ್ಯ ವಿದ್ವಾಂಸರೂ ಸಭೆಗೆ ದಯಮಾಡಿಸಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀಮಾನ್ ಎಂ. ಆರ್. ಶ್ರೀನಿವಾಸಮೂರ್ತಿಗಳು ಸಭಾಧ್ಯಕ್ಷತೆ ವಹಿಸಿದ್ದರು. ಪರಿಷತ್ತಿನ ಪರವಾಗಿ ಆಸ್ಥಾನ ಮಹಾವಿದ್ವಾನ್ ಶ್ರೀಮಾನ್ ನಂಜನಗೂಡು ಶ್ರೀಕಂಠಶಾಸ್ತ್ರಿಗಳವರಿಗೂ ಧಾರವಾಡದ ಶ್ರೀಮಾನ್ ವೀರಭದ್ರಪ್ಪ ಹಾಲಬಾವಿ, ಬಿ.ಎ., ಎಲ್‌ಎಲ್.ಬಿ., ಅವರಿಗೂ ಜರತಾರಿ ಶಾಲು, ಶ್ರೀಗಂಧಕರಂಡಕ ಫಲತಾಂಬೂಲಗಳನ್ನು ಅರ್ಪಿಸಲಾಯಿತು. ಶ್ರೀಮಾನ್ ಡಿ. ವಿ. ಗುಂಡಪ್ಪನವರು ಶ್ರೀಮಾನ್ ನಂಜನಗೂಡು ಶ್ರೀಕಂಠಶಾಸ್ತ್ರಿಗಳ ವಿಷಯವಾಗಿಯೂ, ಪಂಡಿತರತ್ನಂ ಶ್ರೀಮಾನ್ ಬ. ಶಿವಮೂರ್ತಿ ಶಾಸ್ತ್ರಿಗಳು ಶ್ರೀಮಾನ್ ವೀರಭದ್ರಪ್ಪ ಹಾಲಬಾವಿ ಅವರ ವಿಷಯವಾಗಿಯೂ ಅವರ ಪಾಂಡಿತ್ಯವನ್ನೂ ಸದ್ಗುಣ ಸಂಪತ್ತಿಯನ್ನೂ ಕುರಿತು ಭಾಷಣವನ್ನು ಮಾಡಿದಮೇಲೆ ಪರಿಷತ್ತಿನ ಗೌ॥ ಕಾರ್ಯದರ್ಶಿಗಳಾದ ಶ್ರೀ ಸಿ. ಕೆ. ನಾಗರಾಜರಾಯರು ಶ್ರೀ ಶ್ರೀಕಂಠಶಾಸ್ತ್ರಿಗಳವರಿಗೂ ಪರಿಷತ್ತಿನ ಗೌ॥ ಕೋಶಾಧಿಕಾರಿಗಳಾದ ಶ್ರೀ ಎಚ್. ಎಸ್. ಸೀತಾರಾಂ ಅವರು ಶ್ರೀ ವೀರಭದ್ರಪ್ಪ ಹಾಲಬಾವಿ ಅವರಿಗೂ ಅರ್ಪಿಸಿದ ಮಾನಪತ್ರವನ್ನು ಓದಿ ಸುಂದರವಾಗಿ ಕಟ್ಟುಹಾಕಿದ ಮಾನಪತ್ರ, ಜರತಾರಿ ಶಾಲು, ಶ್ರೀಗಂಧದ ಕರಂಡಕ ಮತ್ತು ಫಲತಾಂಬೂಲಗಳನ್ನು ಒಪ್ಪಿಸಿದರು.

ಆಸ್ಥಾನ ವಿದ್ವಾನ್ ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳಿಂದ ಪ್ರಾರ್ಥನೆ ಆದಮೇಲೆ ಗಮಕ ವಿದ್ವಾನ್ ಶ್ರೀ ಎಂ. ರಾಘವೇಂದ್ರರಾಯರು, ನಂಜನಗೂಡು ಶ್ರೀಕಂಠಶಾಸ್ತ್ರಿಗಳಿಂದ ವಿರಚಿತವಾದ "ರೇಣುಕ ವಿಜಯ" ಕಾವ್ಯದಿಂದ ಕೆಲವು ಪದ್ಯಗಳನ್ನು ಸುಶ್ರಾವ್ಯವಾಗಿ ಹಾಡಿ ಸಭಿಕರನ್ನು ಸಂತೋಷಪಡಿಸಿದರು. ಪರಿಷತ್ತಿನ ಅಧ್ಯಕ್ಷರಾದ ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳು ಪ್ರಾಸ್ತಾವಿಕ ಭಾಷಣಮಾಡಿ ಶ್ರೀ ಡಿ. ವಿ. ಗುಂಡಪ್ಪನವರನ್ನೂ ಪಂಡಿತರತ್ನಂ ಬ. ಶಿವಮೂರ್ತಿ ಶಾಸ್ತ್ರಿಗಳನ್ನೂ ಈ ದಿನದ ಅತಿಥಿಗಳ ಬಗ್ಗೆ ಪರಿಚಯ ಮಾಡಿಕೊಡಬೇಕೆಂದು ಪ್ರಾರ್ಥಿಸಿದರು.

ಶ್ರೀಮಾನ್ ಡಿ. ವಿ. ಗುಂಡಪ್ಪನವರು ನಂಜನಗೂಡು ಶ್ರೀಕಂಠಶಾಸ್ತ್ರಿಗಳ ವಿಷಯವಾಗಿ ಮಾತನಾಡುತ್ತ ಪರಿಷತ್ತಿನ ಅಧ್ಯಕ್ಷರು ಶ್ರೀ ಶ್ರೀಕಂಠಶಾಸ್ತ್ರಿಗಳ ಪರಿಚಯಮಾಡಿಕೊಡಬೇಕೆಂದು ನನ್ನನ್ನು ಪ್ರಾರ್ಥಿಸಿದ್ದಾರೆ. ಆದರೆ ನಾನು ಅವರ ಪರಿಚಯವನ್ನು ಮಾಡಿಕೊಡದೆ ನನಗೆ ಅವರಲ್ಲಿರುವ ಗೌರವ ಮತ್ತು ಪ್ರೀತಿವಿಶ್ವಾಸಗಳನ್ನು ಈ ಮೂಲಕ ತೋರ್ಪಡಿಸಿಕೊಳ್ಳುವುದಾಗಿ ತಿಳಿಸಿದರು. ತಾವು ಶ್ರೀ ಶ್ರೀಕಂಠಶಾಸ್ತ್ರಿಗಳನ್ನು ಸುಮಾರು ೪೦ ವರ್ಷಗಳ ಕೆಳಗೆ ನೋಡಿದ್ದಾಗಿಯೂ ಅಲ್ಲಿಂದೀಚೆಗೆ ಅವರನ್ನು ಇದೇ ಮೊದಲಾಗಿ ನೋಡುತ್ತಿರುವುದಾಗಿಯೂ ತಿಳಿಸಿದರು. ಆದರೆ ಮೊದಲನಿಂದಲೂ ಅವರ ಕಾವ್ಯಗಳ ಬಗ್ಗೆ ತಮಗೆ ಗೌರವವಿರುವುದಾಗಿಯೂ ಅವರ ಕಾವ್ಯ ಶೈಲಿ ತುಂಬಾ ಚೆನ್ನಾಗಿರುವುದಾಗಿ ತಿಳಿಸಿದರು. ಶ್ರೀ ಶ್ರೀಕಂಠಶಾಸ್ತ್ರಿಗಳ ಮನೆತನ ಪಂಡಿತರ ಮನೆತನವೆಂದೂ ಅವರ ತಂದೆಗಳೂ ಅವರ ಅಣ್ಣಂದಿರೂ ಸಾಹಿತ್ಯ ಕ್ಷೇತ್ರದಲ್ಲಿ ಮಾಡಿರುವ ಕೆಲಸವನ್ನು ಸ್ಥೂಲವಾಗಿ ವಿವರಿಸಿ ಹೇಳಿದರು, ಶ್ರೀಮಾನ್ ಶ್ರೀಕಂಠಶಾಸ್ತ್ರಿಗಳು ನಿರ್ಮಲ ಜೀವನ ಉಳ್ಳವರೆಂದೂ ಅವರ ಸ್ವಭಾವ ಸಾಧುವಾದದ್ದೆಂದೂ ಅವರ ಕಾವ್ಯಶೈಲಿ ಉತ್ತಮವಾದದ್ದೆಂದೂ ಸರ್ವವಿಧದಲ್ಲಿಯೂ ಅವರನ್ನು ಹಿರಿಕಿರಿಯರು ಅನುಕರಣೆ ಮಾಡಬೇಕೆಂದೂ ತಿಳಿಸಿ ಶ್ರೀಮಾನ್ ಶ್ರೀಕಂಠಶಾಸ್ತ್ರಿಗಳ ಬಗ್ಗೆ ಗೌರವ ಸೂಚಿಸಬೇಕೆಂದು ನಾವು ಪರಿಷತ್ತಿನ ಅಧ್ಯಕ್ಷರನ್ನು ಕೇಳಿಕೊಳ್ಳುತ್ತಿದ್ದುದಾಗಿಯೂ ಆ ಕಾರ್ಯ ಈ ದಿನ ನೆರವೇರಿದ್ದು ತುಂಬಾ ಸಂತೋಷದ

ಸಂಗತಿ ಎಂದು ಹೇಳಿ ಅತಿಥಿಗಳಿಗೆ ಶ್ರೇಯಸ್ಸನ್ನು ಕೋರಿದರು.

ಆಸ್ಥಾನ ವಿದ್ವಾನ್ ಪಂಡಿತರತ್ನಂ ಶ್ರೀ ಬ. ಶಿವಮೂರ್ತಿ ಶಾಸ್ತ್ರಿಗಳು ಮಾತನಾಡುತ್ತ ಶ್ರೀ ಶ್ರೀಕಂಠ ಶಾಸ್ತ್ರಿಗಳ ಬಗ್ಗೆ ತಮಗಿರುವ ಗೌರವವನ್ನು ಸೂಚಿಸಿ ಶ್ರೀ ವೀರಭದ್ರಪ್ಪ ಹಾಲಬಾವಿಯವರ ವಿಷಯವಾಗಿ ತಾವು ನಾಲ್ಕು ಮಾತನಾಡುವುದಾಗಿ ಹೇಳಿ ಅವರ ಪೂರ್ವಚರಿತ್ರೆಯನ್ನೂ ಅವರಿಂದ ಕನ್ನಡ ಸಾಹಿತ್ಯಕ್ಕೆ ಆಗಿರುವ ಉಪಕಾರವನ್ನೂ ಸಭಿಕರಿಗೆ ತಿಳಿಸಿದರು. ವೀರಶೈವ ಸಾಹಿತ್ಯ ಸಂಸ್ಕೃತಿಗಳಿಗೆ ಅವರಿಂದ ಹೇಗೆ ಹೇಗೆ ಉಪಕಾರಗಳಾಗಿವೆಯೆಂದು ವಿವರಿಸಿ ಹೇಳಿದರು. ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಗೆ ಅವರು ಸಲ್ಲಿಸಿರುವ ಸೇವೆ ಶ್ಲಾಘ್ಯವಾದದ್ದೆಂದು ತಿಳಿಸಿ 'ಗಿರಿಜಾ ಕಲ್ಯಾಣ' 'ಶಬರ ಶಂಕರ ವಿಲಾಸ' ಮುಂತಾದ ಗ್ರಂಥ ಪ್ರಕಟನೆಗೆ ಅವರಿಂದ ಬಂದ ಪ್ರೋತ್ಸಾಹ ಯಾವ ರೀತಿ ಇತ್ತೆಂದು ಸ್ಥೂಲವಾಗಿ ವಿವರಿಸಿದರು. ಮೋಳಿಗೆಯ ಮಾರಯ್ಯ, ರಾಣಿಮಹಾದೇವಿಯವರ ವಚನ ಗ್ರಂಥವನ್ನೂ ಮೋಳಿಗೆಯ ಮಾರಯ್ಯನ ಪುರಾಣವನ್ನೂ ಪ್ರಕಟಿಸಿದ ಕೀರ್ತಿ ಅವರಿಗೆ ಸೇರಿದ್ದೆಂದು ತಿಳಿಸಿದರು. ಶ್ರೀ ವೀರಭದ್ರಪ್ಪ ಹಾಲಬಾವಿಯವರು ಉತ್ತಮ ಸಾಹಿತಿಗಳೆಂದೂ ಸಾಹಿತ್ಯ ಸಂಶೋಧಕರೆಂದೂ ಒಳ್ಳೆಯ ಜೀವಿಗಳೆಂದೂ ಕನ್ನಡ ಸಾಹಿತ್ಯದ ಬಗ್ಗೆ ಅವರಿಗೆ ಒಳ್ಳೆಯ ಅಭಿಮಾನವಿರುವುದಾಗಿಯೂ ಹೇಳಿ ಅವರ ಬಗ್ಗೆ ತಮಗೆ ತುಂಬಾ ಗೌರವವಿರುವುದಾಗಿ ತಿಳಿಸಿ ಅವರಿಗೆ ಆಯುರಾರೋಗ್ಯವನ್ನೂ ಶ್ರೇಯಸ್ಸನ್ನೂ ಕೋರಿ ಸುಮಾರು ಅರ್ಧಗಂಟೆ ಕಾಲ ಸ್ಫೂರ್ತಿದಾಯಕವೂ ಬೋಧಪ್ರದವೂ ಆದ ಭಾಷಣವನ್ನು ಮಾಡಿದರು.

ಅತಿಥಿಗಳಾದ ಮಹಾವಿದ್ವಾನ್ ಶ್ರೀ ನಂಜನಗೂಡು ಶ್ರೀಕಂಠಶಾಸ್ತ್ರಿಗಳೂ ಶ್ರೀ ವೀರಭದ್ರಪ್ಪ ಹಾಲಬಾವಿಯವರೂ ಭಾಷಣ ಮಾಡಿ ಪರಿಷತ್ತಿನ ಬಗ್ಗೆ ತಮಗಿರುವ ಗೌರವವನ್ನೂ ಈ ಸಮಾರಂಭವನ್ನು ಏರ್ಪಡಿಸಿ ಗೌರವ ಮಾಡಿದ ಅಧಿಕಾರಿವರ್ಗದವರನ್ನೂ ಇತರರನ್ನೂ ಮನಃಪೂರ್ವಕವಾಗಿ ಅಭಿನಂದಿಸಿದರು. ಪರಿಷತ್ತಿಗೆ ಶ್ರೀ ಶ್ರೀಕಂಠಶಾಸ್ತ್ರಿಗಳು "ಶ್ರೀಕೃಷ್ಣರಾಜೇಂದ್ರ ವಂಶಚರಿತಂ" ಎಂಬ ಚಂಪೂಗ್ರಂಥವನ್ನು ಸರ್ವಾಧಿಕಾರದೊಡನೆ ಪರಿಷತ್ತಿಗೆ ಕಾಣಿಕೆಯಾಗಿ ಸಲ್ಲಿಸಿದರು.

ಶ್ರೀ ವೀರಭದ್ರಪ್ಪ ಹಾಲಬಾವಿ ಅವರು ರೂ. ೫೦ನ್ನು ಪರಿಷತ್ತಿಗೆ ಕಾಣಿಕೆಯಾಗಿ ಸಲ್ಲಿಸಿದರು.

ಪರಿಷತ್ತಿನ ಅಧ್ಯಕ್ಷರಾದ ಶ್ರೀ ಶ್ರೀನಿವಾಸಮೂರ್ತಿಗಳು ಅಧ್ಯಕ್ಷ ಭಾಷಣ ಮಾಡುತ್ತಾ ಈ ಕಾರ್ಯಕ್ರಮವನ್ನೇರ್ಪಡಿಸಲು ಇರುವ ಔಚಿತ್ಯವನ್ನು ವಿವರಿಸಿ ಈ ದಿನದ ಅಥಿತಿಗಳು ತುಂಬಾ ದೊಡ್ಡ ವಿದ್ವಾಂಸರುಗಳೆಂದೂ ಪರಿಷತ್ತು ಅವರನ್ನು ಗೌರವಿಸಲು ಅವಕಾಶ ಮಾಡಿಕೊಟ್ಟದ್ದುಕ್ಕಾಗಿ ಅತಿಥಿಗಳನ್ನು ತಾವು ಮನಃಪೂರ್ವಕವಾಗಿ ವಂದಿಸುವುದಾಗಿಯೂ ತಿಳಿಸಿದರು. ಕಳೆದ ಎರಡು ವರ್ಷಗಳಿಂದ ಪರಿಷತ್ತು ಈ ರೀತಿ ಈ ದಿನದ ಅಥಿತಿಗಳೂ ಸೇರಿ ಕನ್ನಡನಾಡಿನ ಆರುಮಂದಿ ವಿದ್ವಾಂಸರಿಗೆ ಮಾನ ಪತ್ರ ಸಮರ್ಪಣೆಮಾಡಿ ಗೌರವಿಸಿರುವುದಾಗಿಯೂ ಇನ್ನು ಮುಂದೆಯೂ ಈ ಸಂಪ್ರದಾಯವನ್ನು ಬೆಳಸಿಕೊಂಡು ಹೋಗುವುದು ಒಳ್ಳೆಯದೆಂದೂ ಅಭಿಪ್ರಾಯಪಟ್ಟರು. ಸರ್ಕಾರದರೂ, ಮಹಾಜನಗಳೂ ಪರಿಷತ್ತಿಗೆ ದ್ರವ್ಯ ಸಹಾಯ ಮಾಡಿ ನಾಡಿನ ದೊಡ್ಡ ದೊಡ್ಡ ವಿದ್ವಾಂಸರನ್ನು ಪರಿಷತ್ತಿನ ಮೂಲಕ ಗೌರವಿಸಲು ಸಹಾಯ ಮಾಡಬೇಕೆಂದು ಪ್ರಾರ್ಥಿಸಿದರು.

ಮೈಸೂರು ಸಂಸ್ಥಾನದ ಶ್ರೀಮನ್ ಮಹಾರಾಜರವರೂ, ಡಾ॥ ಎಸ್. ಸಿ. ನಂದೀಮಠ ಅವರೂ, ಶ್ರೀಗಳಾದ ಕೆ. ಟಿ. ಭಾಷ್ಯಂ, ಪರಮಶೆಟ್ಟಿ ಕಾಡಪ್ಪಾ ಪಾಟೀಲ ಗೋಕಾಕ, ಮಂಜೇಶ್ವರ ಗೋವಿಂದ ಪೈ, ಸದಾಶಿವ ಚಿ. ಬಡಿಗಣ್ಣನವರ ಗದಗ, ಕೆ. ನಾಗೇಶ ಹತ್ವಾರ ಮದರಾಸು, ಪಿ. ವೆಂಕಟರಮಣಯ್ಯ, ಮೈಸೂರು— ಮೊದಲಾದ ಮಹನೀಯರು ಸಂದೇಶಗಳನ್ನು ಕಳಿಸಿದ್ದರು.

ಗೌ॥ ಕೋಶಾಧಿಕಾರಿಗಳಾದ ಶ್ರೀ ಎಚ್. ಎಸ್. ಸೀತಾರಾಂ ಅವರು ಬಂದಿದ್ದ ಸಂದೇಶಗಳನ್ನು ಓದಿ ಆ ದಿನದ ಸಮಾರಂಭದಲ್ಲಿ ಸಹಾಯ ಮಾಡಿದವರೆಲ್ಲರನ್ನು ವಂದಿಸಿದರು. ರಾಷ್ಟ್ರಗೀತೆಯೊಡನೆ ಸಭೆ ಮುಕ್ತಾಯವಾಯಿತು.

## ಶ್ರೀಮನ್ಮಹಾರಾಜರು

# ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್,

ಜಿ.ಸಿ.ಎಸ್.ಐ., ಜಿ.ಸಿ.ಬಿ.,

## ಅವರ ಸಂದೇಶ

THE PALACE,
MYSORE
೭-೧೧-೧೯೫೨

"ಕನ್ನಡ ಸಾಹಿತ್ಯ ಸೇವೆಗಾಗಿ ಶ್ರಮಿಸಿ ಸುಪ್ರಸಿದ್ಧರಾಗಿರುವ ಆಸ್ಥಾನ ಮಹಾವಿದ್ವಾನ್ ಶ್ರೀಮಾನ್ ನಂಜನಗೂಡು ಶ್ರೀಕಂಠಶಾಸ್ತ್ರಿಗಳವರಿಗೂ, ಸುಪ್ರಸಿದ್ಧ ವೀರಶೈವ ಕವಿಗಳಾದ ಶ್ರೀಮಾನ್ ಧಾರವಾಡದ ವೀ. ಬ. ಹಾಲಬಾವಿಯವರಿಗೂ ಮಾನಪತ್ರ ಸಮರ್ಪಣೆ ಮಾಡಿ ಗೌರವಿಸಲು ಕನ್ನಡ ಸಾಹಿತ್ಯ ಪರಿಷತ್ತು ನಿರ್ಣಯಿಸಿ ಏರ್ಪಾಡು ಮಾಡಿರುವುದು ಕನ್ನಡಿಗರಾದ ನಮ್ಮೆಲ್ಲರಿಗೂ ಬಹು ಹೆಮ್ಮೆಯ ವಿಷಯ.

ಶ್ರೀಮಾನ್ ಶ್ರೀಕಂಠಶಾಸ್ತ್ರಿಗಳು ಕನ್ನಡ ಸಾಹಿತ್ಯ ಸೇವೆಯ ಜೊತೆಗೆ ಹಲವಾರು ಕನ್ನಡ ನಾಟಕಗಳನ್ನು ಪ್ರಕಾಶಪಡಿಸುವುದರ ಮೂಲಕ ಕನ್ನಡ ನಾಟಕಗಳ ಅಭಿವೃದ್ಧಿಗೂ ಬೆಂಬಲವಿತ್ತಿರುವರು. ಉಪಾಧ್ಯಾಯವೃತ್ತಿಯನ್ನವಲಂಬಿಸಿ ಕನ್ನಡ ಭಾಷೆಯಲ್ಲಿ ಅನೇಕರಿಗೆ ಗುರುಗಳಾಗಿ ಪಾಠಪ್ರವಚನಗಳನ್ನು ನಡೆಸಿ ಅವರೆಲ್ಲರ ಕೃತಜ್ಞತೆಗೆ ಪಾತ್ರರಾಗಿರುತ್ತಾರೆ. ಹೀಗೆ ಪಾಠ ಕಲಿತವರಲ್ಲಿ ನಾವೂ ಒಬ್ಬರು.

ಶ್ರೀಮಾನ್ ವೀ. ಬ. ಹಾಲಬಾವಿಯವರು ಅನೇಕ ಕನ್ನಡ ಗ್ರಂಥಗಳನ್ನು ಪ್ರಕಾಶಪಡಿಸಿರುವುದಲ್ಲದೆ ಲಿಂಗಾಯತ ವಿದ್ಯಾಭಿವೃದ್ಧಿ ಸಂಘದ ಸಾಹಿತ್ಯ ಭಾಗಕ್ಕೆ ಅಧ್ಯಕ್ಷರಾಗಿ ಕನ್ನಡತಾಯಿಗೆ ಬಹುವಾಗಿ ಸೇವೆ ಸಲ್ಲಿಸಿರುವರು. ಇವರ ಅಸಾಧಾರಣ ಕನ್ನಡಭಾಷಾ ಪರಿಜ್ಞಾನವು ಕನ್ನಡ ಸಾಹಿತಿಗಳೆಲ್ಲರಲ್ಲಿಯೂ ಇವರಲ್ಲಿ ಗೌರವ ಬುದ್ಧಿಯನ್ನುಂಟುಮಾಡಿದೆ.

ಈ ಸುಪ್ರಸಿದ್ಧ ಕನ್ನಡ ಮಾತೆಯ ಭಕ್ತರಿಗೆ ಮಾನ್ಯಪತ್ರವನ್ನು ಸಮರ್ಪಿಸುವುದರಿಂದ ಕನ್ನಡ ಸಾಹಿತ್ಯ ಪರಿಷತ್ತಿಗೇ ಒಂದು ಹೆಚ್ಚಿನ ಗೌರವ ದೊರಕಿದಂತಾಯಿತೆಂದು ನಮ್ಮ ಭಾವನೆ.

ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಪರಿಷತ್ತಿನಿಂದ ಗೌರವಿಸಲ್ಪಟ್ಟ ಈ ಮಾನ್ಯಕವಿಗಳು ಕನ್ನಡ ಸೇವೆಯನ್ನು ಇನ್ನೂ ಹೆಚ್ಚು ಹೆಚ್ಚಾಗಿ ಸಲ್ಲಿಸಿ ಕನ್ನಡ ಸಾಹಿತ್ಯಾಭಿವೃದ್ಧಿಯು ಸರ್ವತೋಮುಖವಾಗಿ ಬೆಳೆಯಲು ಸಹಾಯಕರಾಗಿ ಕನ್ನಡ ತಾಯಿಯ ಕೃಪೆಗೆ ಪಾತ್ರರಾಗಲೆಂದು ನಾವು ಹಾರೈಸುತ್ತೇವೆ."

ಶ್ರೀ ಜಯಚಾಮರಾಜ ಒಡೆಯರ್

ಆಸ್ಥಾನ ಮಹಾವಿದ್ವಾನ್

# ಶ್ರೀಮಾನ್ ನಂಜನಗೂಡು ಶ್ರೀಕಂಠಶಾಸ್ತ್ರಿಗಳವರಿಗೆ

## ಕನ್ನಡ ಸಾಹಿತ್ಯ ಪರಿಷತ್ತು

## ಅರ್ಪಿಸಿದ ಸನ್ಮಾನಪತ್ರ



ಸನ್ಮಾನ್ಯರೆ,

ಕನ್ನಡ ನಾಡಿನಲ್ಲಿ ಸುಪ್ರಸಿದ್ಧವಾದ ಗರಳಪುರೀ ಪುಣ್ಯಕ್ಷೇತ್ರದಲ್ಲಿ ಪರಂಪರಾಗತವಾಗಿ ಪಂಡಿತೋತ್ತಮರನ್ನೂ ಆಸ್ಥಾನ ವಿದ್ವಾಂಸರನ್ನೂ ಪಡೆದುಬಂದ ವಂಶದಲ್ಲಿ ಜನಿಸಿ ತಮ್ಮ ಪೂರ್ವೀಕರಂತೆಯೇ ಮಹಾಕವಿಗಳೂ ಉಭಯ ಭಾಷಾ ಪಂಡಿತರೂ ಆಸ್ಥಾನ ಮಹಾವಿದ್ವಾಂಸರೂ ಆಗಿ ಕೀರ್ತಿ ಪಡೆದಿರುವ ತಮ್ಮನ್ನು ಈ ದಿನ ಕನ್ನಡ ಸಾಹಿತ್ಯ ಪರಿಷತ್ತಿಗೆ ಬರಮಾಡಿಕೊಂಡು ಕನ್ನಡನಾಡಿನ ಕೃತಜ್ಞತೆಯನ್ನೂ ಗೌರವವನ್ನೂ ತಮಗೆ ಸಲ್ಲಿಸುವ ಭಾಗ್ಯ ಒದಗಿರುವುದಕ್ಕಾಗಿ ನಮಗೆಲ್ಲ ಬಹಳ ಸಂತೋಷವಾಗಿದೆ. ಕನ್ನಡ ಜನತೆಯ ಪರವಾಗಿ ತಮಗೆ ಆದರದ ಸ್ವಾಗತವನ್ನು ನೀಡುತ್ತೇವೆ. ಈ ದಿನ ಪರಿಷತ್ತಿನ ಚರಿತ್ರೆಯಲ್ಲಿ ಶುಭದಿನವಾಗಿದೆ. ತಾವು ನಮ್ಮಲ್ಲಿ ವಿಶ್ವಾಸವಿಟ್ಟು ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಈ ವೃದ್ಧಾಪ್ಯದಲ್ಲಿ ಇಷ್ಟುದೂರ ದಯಮಾಡಿಸಿ ನಮ್ಮ ಇಷ್ಟಾರ್ಥವನ್ನು ಸಲ್ಲಿಸಿದ್ದಕ್ಕಾಗಿ ನಾವು ತಮಗೆ ಬಹಳ ಋಣಿಗಳಾಗಿದ್ದೇವೆ.

ಪ್ರಪಂಚದ ಮೊದಲನೆಯ ಮಹಾಯುದ್ಧಕ್ಕೆ ಕೆಲವು ವರ್ಷಗಳ ಪೂರ್ವದಲ್ಲಿ ಕನ್ನಡ ನಾಡಿನಲ್ಲಿ ಪ್ರಾರಂಭವಾದ ಕನ್ನಡ ಭಾಷಾ ಸಾಹಿತ್ಯಗಳ ಪುನರುದ್ಧಾರ, ನೂತನ ಕನ್ನಡ ಸಾಹಿತ್ಯ ನಿರ್ಮಾಣ, ಪ್ರಾಚೀನ ಸಾಹಿತ್ಯದ ಉದ್ದಾಮ ಗ್ರಂಥ ಪ್ರಕಟನೆಗಳಿಂದಾದ ಜ್ಞಾನಪ್ರಕಾಶ ಮತ್ತು ಕನ್ನಡಿಗರ ಹೃದಯಗಳಲ್ಲಿ ಚಿಮ್ಮುತ್ತಿದ್ದ ನವೀನೋತ್ಸಾಹ-ಅವುಗಳೆಲ್ಲ ಈ ದಿನ ತಮ್ಮ ಸಂದರ್ಶನದಿಂದ ನಮ್ಮ ಸ್ಮೃತಿ ಪಟಲದಲ್ಲಿ ಚಲಚ್ಚಿತ್ರ ದೃಶ್ಯಗಳಂತೆ ತೋರಿಬರುತ್ತಿವೆ. ಆ ನೂತನ ಸಾಹಿತ್ಯನಿರ್ಮಾಣ ಮಹೋತ್ಸವದಲ್ಲಿ ತಾವು ದೀಕ್ಷಿತರಾಗಿ ಒಂದು ಕಡೆ ರಂಗಸ್ಥಲದಲ್ಲಿ ಅಭಿನಯಿಸುವುದಕ್ಕೆ ಯೋಗ್ಯವಾದ ಉನ್ನತ ಮಟ್ಟದ ನಿರುಪಮಾ, ಧ್ರುವ ವಿಜಯ, ವಿಷ್ಣುಲೀಲಾ, ಮೊದಲಾದ ಹಲವು ನಾಟಕಗಳನ್ನು ರಚಿಸಿಕೊಟ್ಟು ಒಂದು ಹೊಸ ನಾಟಕ ಪ್ರಪಂಚವನ್ನೇ ಸೃಷ್ಟಿಸಿ ಕನ್ನಡಿಗರಿಗೆ ಮಹೋಪಕಾರ ಮಾಡಿದಿರಿ; ಇನ್ನೊಂದು ಕಡೆ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ನಾಟಕಗಳ ವ್ಯಾಸಂಗಕ್ಕೆ ಅನುಕೂಲಿಸುವಂತೆ ಹಳಗನ್ನಡದಲ್ಲಿ **ಕನಕಲತಾಪರಿಣಯ, ಪ್ರಿಯದರ್ಶಿಕೆ,** ಮೊದಲಾದ ಹಲವು ಪ್ರೌಢ ನಾಟಕಗಳನ್ನು ರಚಿಸಿ, ಕನ್ನಡದ ವಿದ್ಯಾರ್ಥಿಗಳಿಗೆ ಮಹೋಪಕಾರ ಮಾಡಿದಿರಿ; ಭಾರತ ರಾಮಾಯಣಗಳ ಮುಖ್ಯಭಾಗಗಳೆಲ್ಲ ರಂಗಸ್ಥಳದಮೇಲೆ ನಾಟಕರೂಪದಲ್ಲಿ ಬಂದು ಸಾಮಾನ್ಯ ಜನಕ್ಕೆ ಮನರಂಜನೆಯೂ ಪುಣ್ಯಲಾಭವೂ ಆಗುವಂತೆ **ರಾಘವಾಭ್ಯುದಯ, ಸೀತಾ ಸುವರ್ಣಮೃಗ, ರಾಜಸೂಯ, ವಿಜಯಾಭ್ಯುದಯ,**—ಮೊದಲಾದ ಹಲವು ಪೌರಾಣಿಕ ನಾಟಕಗಳನ್ನು ರಚಿಸಿ ಸಾಹಿತ್ಯಕ್ಕೆ ಮಹೋಪಕಾರ ಮಾಡಿದಿರಿ. ಹೀಗೆ ರೂಪಕ ಸಾಹಿತ್ಯದಲ್ಲಿ ತಾವು ವಾಗ್ದೇವಿಯ ಭಂಡಾರವನ್ನು ತುಂಬಿದುದಲ್ಲದೆ ಸ್ವಚ್ಛವೂ ಸ್ಫುಟವೂ ಲಲಿತವೂ ಆದ ಗದ್ಯಶೈಲಿಯಲ್ಲಿ ಹಲವು ಸ್ವತಂತ್ರ ಕಾದಂಬರಿಗಳನ್ನೂ ಪ್ರಬಂಧಗಳನ್ನೂ ರಚಿಸಿ, ಆಂಧ್ರಸಾಹಿತ್ಯದಿಂದಲೂ ಕೆಲವು ಉತ್ತಮ ಕೃತಿಗಳನ್ನು ಭಾಷಾಂತರಿಸಿ, ಕನ್ನಡ ಸಾಹಿತ್ಯ ಸೇವೆಯನ್ನು ಮನವಾರೆ ಮಾಡಿದಿರಿ. ತಾವು ರಚಿಸಿದ ಎಪ್ಪತ್ತೆಂಟು ವಿವಿಧ ಕೃತಿಗಳು ತಮ್ಮ ಪಾಂಡಿತ್ಯ, ಕಲ್ಪನಾಶಕ್ತಿ, ಕವಿತಾ ಸಾಮರ್ಥ್ಯ ಮತ್ತು ಪ್ರತಿಭೆಗಳ ಮಹತ್ತನ್ನು ಸಾರುತ್ತಿವೆ. ಪದ್ಯದಲ್ಲಿಯೂ ಗದ್ಯದಲ್ಲಿಯೂ ಕಂದವೃತ್ತಗಳಲ್ಲಿಯೂ ಷಟ್ಪದಿಗಳಲ್ಲಿಯೂ ಲೀಲಾಜಾಲವಾಗಿ ಕೃತಿ ರಚನೆ ಮಾಡುವ ವರ ಕವಿಗಳು ತಾವು. ರಾಜಾಸ್ಥಾನದಲ್ಲಿ ಏರ್ಪಡಿಸಿದ್ದ ಆಶು ಕವಿತಾ ಸ್ಪರ್ಧೆಯಲ್ಲಿ ಪ್ರಥಮ ಪಾರಿತೋಷಕವನ್ನು ಪಡೆದು ಬಹುಮಾನಿತರಾದ ಆಶುಕವಿಗಳು ತಾವು. ಆಳುವ ಮಹಾಸ್ವಾಮಿಯವರಿಗೆ ಕನ್ನಡ ಬೋಧಕರಾಗಿ ವಿದ್ಯಾಗುರುಗಳಾಗಿದ್ದವರು ತಾವು. ಶ್ರೀಮದ್ರಂಭಾಪುರೀ ಮಠಾಧ್ಯಕ್ಷರ ಅಪೇಕ್ಷೆಯಂತೆ ಕನ್ನಡದಲ್ಲಿ ರೇಣುಕವಿಜಯವೆಂಬ ನಿಸರ್ಗ ರಮಣೀಯ ಷಟ್ಪದೀ ಕಾವ್ಯವನ್ನು ರಚಿಸಿ ಪರಮತ ಸಹಿಷ್ಣುತೆಗೆ

ಮಾರ್ಗದರ್ಶಕರಾದ ಮಹಾನುಭಾವರು ತಾವು. ಪತ್ರಿಕಾಪ್ರಪಂಚದಲ್ಲಿ ಕರ್ಣಾಟಕಚಂದ್ರಿಕೆ ಎಂಬ ಸರ್ವಾಂಗ ಸುಂದರವಾದ ಮಾಸಪತ್ರಿಕೆಯನ್ನು ಹದಿಮೂರು ವರ್ಷಗಳ ಕಾಲ ನಡಸಿ ಆದರ್ಶ ಸಂಪಾದಕರಾಗಿದ್ದವರು ತಾವು.

ಮಹನೀಯರೆ, ತಮ್ಮ ಕವಿತಾ ಸಾಮರ್ಥ್ಯವನ್ನೂ ಉಭಯಭಾಷಾ ಪಾಂಡಿತ್ಯವನ್ನೂ ಮೆಚ್ಚಿ ಕರ್ಣಾಟಕ ರತ್ನಸಿಂಹಾಸನಾಧೀಶ್ವರರಾಗಿದ್ದ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರು ತಮ್ಮನ್ನು ತಮ್ಮ ಆಸ್ಥಾನ ವಿದ್ವಾಂಸರನ್ನಾಗಿ ಮಾಡಿದರೆಂಬುದನ್ನೂ ಅನಂತರ ಆಸ್ಥಾನ ಮಹಾವಿದ್ವಾಂಸರನ್ನಾಗಿ ಮಾಡಿ ಗೌರವಿಸಿದರೆಂಬುದನ್ನೂ ನಾವು ಸಂತೋಷದಿಂದ ಜ್ಞಾಪಿಸಿಕೊಳ್ಳುತ್ತಿದ್ದೇವೆ. ಭರತಖಂಡದ ಉದ್ಯಾನ ನಗರವೆಂದು ಪ್ರಸಿದ್ಧವಾದ ನಮ್ಮ ರಾಜಧಾನಿಯಲ್ಲಿ ವೃದ್ಧಪಿತಾಮಹ ಶ್ರೀ ಎಂ. ವೆಂಕಟಕೃಷ್ಣಯ್ಯನವರ ಅಧ್ಯಕ್ಷತೆಯಲ್ಲಿ ರಾಜಕವಿಭೂಷಣ ಲಿಂಗರಾಜ ಅರಸರ ಹಸ್ತ ಮೈಸೂರಿನ ಪೌರರು ತಮಗೆ ರತ್ನಖಚಿತವಾದ ಕಂಕಣಗಳನ್ನಿತ್ತು ಗೌರವಿಸಿದರೆಂಬುದನ್ನು ಹೆಮ್ಮೆಯಿಂದ ಸ್ಮರಿಸಿಕೊಳ್ಳುತ್ತಿದ್ದೇವೆ. ಶ್ರೀಮದ್ರಂಭಾಪುರೀ ಮಠಾಧ್ಯಕ್ಷರು ತಮ್ಮನ್ನು ಶ್ರೀಮಠಕ್ಕೆ ಬರಮಾಡಿಕೊಂಡು ತುಂಬಿದ ಆಸ್ಥಾನದಲ್ಲಿ ಶಾಲುಜೋಡಿ ಖಿಲ್ಲತ್ತುಗಳಿಂದಲೂ ಸುವರ್ಣ ದಕ್ಷಿಣೆಗಳಿಂದಲೂ ಮನ್ನಿಸಿದರೆಂಬುದನ್ನು ಸಂತೋಷದಿಂದ ಅರಿತಿದ್ದೇವೆ. ಯಾವುದೊಂದು ಬಹುಮಾನದ ಮತ್ತು ಶ್ಲಾಘನೆಯ ಅಪೇಕ್ಷೆ ತಮಗಿಲ್ಲದಿದ್ದರೂ ಹೀಗೆ ಗುರುಮನೆ ಅರಮನೆಗಳಿಂದಲೂ ಸಾರ್ವಜನಿಕರಿಂದಲೂ ಶ್ಲಾಘನೆಗಳೂ ಹಲವು ಬಹುಮಾನಗಳೂ ಲಭಿಸಿದ ತಮಗೆ ಕನ್ನಡ ಸಾಹಿತ್ಯ ಪರಿಷತ್ತು ಈ ದಿನದಲ್ಲಿ ಗೌರವವನ್ನು ಸಲ್ಲಿಸಿ ಕೃತಕೃತ್ಯವಾಗಿದೆ. ಕನ್ನಡ ಸಾಹಿತ್ಯ ಸೇವೆಯ ಮಹೋತ್ಸಾಹದಿಂದ ತಾವು ಅರ್ಧ ಶತಮಾನದ ಹಿಂದೆಯೇ ಪ್ರಾರಂಭಿಸಿದ ಸಾಹಿತ್ಯಸೃಷ್ಟಿ ಮತ್ತು ಸಾಹಿತ್ಯವೃಷ್ಟಿ ಈಗ ಹಲವು ಶಾಖೆಗಳಾಗಿ ಪೂರ್ಣ ಪ್ರವಾಹದಿಂದ ನಾಡಿನಲ್ಲಿ ಹರಿಯುತ್ತಿರುವುದನ್ನು ವೃದ್ಧಾಪ್ಯದಲ್ಲಿರುವ ತಾವು ನೋಡಿ ಸಂತೋಷಪಡುತ್ತಿದೀರೆಂದು ನಂಬಿದ್ದೇವೆ.

ತಾವು ರಾಜಧಾನಿಯಲ್ಲಿರುವ ಅರಸು ಬೋರ್ಡಿಂಗ್ ಸ್ಕೂಲಿನಲ್ಲಿ ನಾಲ್ಕು ದಶಕಗಳ ಕಾಲ ಕನ್ನಡ ಅಧ್ಯಾಪಕರಾಗಿದ್ದು ಸಹಸ್ರಾರು ಶಿಷ್ಯರಲ್ಲಿ ಕನ್ನಡ ಪ್ರೇಮವನ್ನು ಬೆಳಸಿದಿರಿ. ಎಲ್ಲೆಡೆಯೂ ತಮಗೆ ಮಿತ್ರರು ಎಲ್ಲರಿಗೂ ತಾವು ಮಿತ್ರರು ಎಂಬುದಾಗಿ ತಮ್ಮ ಗುಣ ಗೌರವ, ಸರಸಸಂಭಾಷಣೆ ಮತ್ತು ವಿದ್ವತ್ ಪ್ರೌಢಿಮೆಗಳಿಂದ ನಾನಾಸ್ಥಾನಗಳ ನೂರಾರು ಜನರ ಮಿತ್ರರಾಗಿ ಲೌಕಿಕದಲ್ಲಿ ಗೌರವಸ್ಥಾನವನ್ನು ಗಳಿಸಿದಿರಿ. ಮೈಸೂರು ನಗರದಲ್ಲಿ ಹಲವು ಸಾರ್ವಜನಿಕ ಸಂಸ್ಥೆಗಳ ಸದಸ್ಯರಾಗಿ, ನಿರ್ದೇಶಕರಾಗಿ, ಅಧ್ಯಕ್ಷರಾಗಿ ಪ್ರಜೋಪಕಾರಕ ಕಾರ್ಯಗಳನ್ನು ಇಂದಿಗೂ ನಡಸಿಕೊಂಡು ಬರುತ್ತ ಪ್ರಜಾ ಬಂಧುವಾಗಿದ್ದೀರಿ.

ಮಹನೀಯರೆ, ಸಂಸಾರದಲ್ಲಿ ವಿಧಿ ತಮ್ಮನ್ನು ಕಷ್ಟದುಃಖಗಳಿಗೆ ಸಿಕ್ಕಿಸಿದರೂ ತಮ್ಮನ್ನು ಕ್ರೂರ ಪರೀಕ್ಷೆಗೆ ಗುರಿಮಾಡಿದರೂ ಸಮಾಧಾನ ಚಿತ್ತದಿಂದ ತಾವು ಎಲ್ಲವನ್ನೂ ಸಹಿಸಿಕೊಂಡು ಕರ್ತವ್ಯಕರ್ಮಗಳನ್ನು ಸಮಯನಿಷ್ಠೆಯಿಂದ ನೆರವೇರಿಸುತ್ತ ಕಾಲನ ಬೆದರಿಕೆಗೆ ಬಗ್ಗದೆ ಇರುವುದು ಲೋಕಕ್ಕೆ ಆದರ್ಶಪ್ರಾಯವಾಗಿದೆ. ತಮ್ಮ ಕರ್ತವ್ಯನಿಷ್ಠೆ, ಲೋಕೋಪಕಾರಕ ಜೀವನ, ಸೌಜನ್ಯ ಮತ್ತು ಸಾತ್ವಿಕತೆಗಳು ಸಾಧಕರಿಗೆ ಅನುಕರಣೀಯವಾಗಿವೆ. ತಮಗೆ ಭಗವಂತನು ಆಯುರಾರೋಗ್ಯ ಐಶ್ವರ್ಯಗಳನ್ನು ಕೊಟ್ಟು ನಾಡುನುಡಿಗಳ ಸೇವೆ ಇತೋಪ್ಯತಿಶಯವಾಗಿ ತಮ್ಮಿಂದ ನಡೆಯುವಂತೆ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಇಂತು

**ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರು**

# ಕನ್ನಡ ಸಾಹಿತ್ಯ ಪರಿಷತ್ತು ನೀಡಿದ ಮಾನಪತ್ರಕ್ಕೆ

## ಆಸ್ಥಾನ ಮಹಾವಿದ್ವಾನ್

## ನಂಜನಗೂಡು ಶ್ರೀಕಂಠಶಾಸ್ತ್ರಿಗಳವರ

## ಕೃತಜ್ಞತೆ

ಕಂದ : ಪರರ ಗುಣಮೆನಿತು ಕಿರಿದಾ ।
ಗಿರಿಯುಂ ಪರ್ವತಮದೆಂದು ಭಾವಿಸುತವರಂ ॥
ಕರೆದಾದರಿಸುವ ನಿರ್ಮ ।
ತ್ಸರ ಭಾವರ್ಗಿದೆ ಸಭಾಸದರ್ಗಾಂ ಮಣಿವೆಂ ॥

ವಾರ್ಧಕಷಟ್ಪದಿ:

ಸಿರಿ ಪೊನ್ನ ರನ್ನಜನ್ನಾಂಡಯ್ಯ ಪಂಪಾಗ್ಗ ।
ಳರು ನಾಗಚಂದ್ರ ನೇಮಿಗಳು ವಿಟ್ಠಲನಾಥ ।
ನರಹರಿ ಷಡಕ್ಷರೀ ಲಕ್ಷ್ಮೀಶ ನಾರಾಯಣಾದ್ಯರಾ
ಹರಿಹರನು ಮೇಣ್ ॥
ನರಪ ಚಿಕದೇವ ತಿರುಮಲೆಯಾರ್ಯ ಸಿಂಗರಾ ।
ರ್ಯರು ರಾಘವಾಂಕನೊಲ್ದೆರೆದ ಸವಿನುಡಿಗಳಂ ।
ಸ್ಮರಿಸುತಿರುವಾನೋಂಪಿಯೊಳ್ಪಿನಗೆ ಪರಿಷತ್ತಿ
ನೊಲುಮೆಯನನುಗ್ರಹಿಸಿತು ॥

ಶ್ರೀ ಕೃಷ್ಣರಾಜೇಂದ್ರ ಪರಿಷನ್ನಿಕೇತನವ ।
ನೇಕ ವಿದ್ವಜ್ಜನಾಶ್ರಯವಲ್ತೆ ಕರ್ಣಾಟ ।
ದಾಕಾವ್ಯಚಂಪೂ ಪ್ರಬಂಧ ನಾಟಕಕಾರರಿಂಗೆ
ಮೆಚ್ಚಿನಾಡುಂಬೊಲಂ ॥
ಶ್ರೀಕರಂ ಬರಿಗೈಯೊಳೊಳವುಗುವುದುಚಿತಮು ।
ಲ್ತಾ ಕಾರಣದಿ ಕಾಣ್ಕೆಯೊಪ್ಪಿಸಿದೆನೆನ್ನಯಾ ।
ಶ್ರೀ ಕೃಷ್ಣರಾಜೇಂದ್ರವಂಶ ಚರಿತವನೊಲ್ದು
ಸರ್ವಾಧಿಕಾರದೊಡನೆ ॥

ಕವಿ ಗಮಕಿ ಗಾಯಕ ಕಲಾವಿದರನುತ್ಸಾಹಿ ।
ಸುವ ಮಹತ್ಕಾರ್ಯದಲಿ ತೊಡಗಿ ಮುಂಬರಿ
ಯುತಲಿ ।
ಸುವಿಶಾಲ ಭಾವದಿಂದಖಿಲ ಕರ್ನಾಟಕವ
ನೊಂದುಗೂಡಿಪಯತ್ನದೆ ॥
ಅವಿರತಂ ಶ್ರಮಿಪ ಪರಿಷತ್ತಿನ ಸಭಾಸದರ ।
ನಿವಹಮಿಂದೆನಗಿತ್ತ ಮಾನಪತ್ರವು ಬಗೆಯೆ ;
ಸುವಿದಿತವು ದೇಶೀಯ ಬಾಂಧವ ಪ್ರೇಮ
ವಿದ್ಯೋತಕವು ಪೆರತಲ್ಲವು ॥

ಕಾವೇರಿಯಿಂದ ಗೋದಾವರಿಯ ವರಮೆಂದ ।
ದಾವವಿಸ್ತಾರ ಕರ್ಣಾಟಕವ ಪೆರ್ಮೆಯಿಂ ।
ವ್ಯಾವರ್ಣಿಸಿರುವನೋ ನೃಪತುಂಗನದನಿಂದು
ಕಣ್ಣಾರೆ ಕಾಂಬ ಭಾಗ್ಯಂ ॥
ಶ್ರೀವಿಧಿವಧೂದಯದೆ ಲಭಿಸಲೆಮಗಾಕಲಾ ।
ಕೋವಿದರ ಮನ್ನಿಸುವ ಸಾಹಿತ್ಯ ಪರಿಷತ್ತು ।
ಭಾವುಕಪ್ರದಮೆನಿಸಿಯಾ ಚಂದ್ರಭಾಸ್ಕರಂ
ಭಾಸಿಸಲಿ ಭಾರತದಲಿ ॥

ಭದ್ರಂ – ಶುಭಂ ಮಂಗಳಂ

# ಶ್ರೀಮಾನ್ ವೀರಭದ್ರಪ್ಪನವರು ಹಾಲಬಾವಿ, ಬಿ.ಎ.,ಎಲ್‌ಎಲ್.ಬಿ., ಅವರಿಗೆ
## ಕನ್ನಡ ಸಾಹಿತ್ಯ ಪರಿಷತ್ತು
## ಅರ್ಪಿಸಿದ ಸನ್ಮಾನಪತ್ರ

ಸನ್ಮಾನ್ಯರೆ,

ಕನ್ನಡ ನಾಡಿನ ತಿಲಕದಂತಿರುವ ಧಾರವಾಡದ ನಿವಾಸಿಗಳೂ, ಸರ್ವಗುಣದ ಮೂರ್ತಸ್ವರೂಪರೂ, ಸದಾಚಾರಸಂಪನ್ನರೂ, ಶರಣಮಾರ್ಗಪ್ರಚೋದಕರೂ ಆದ ತಮ್ಮನ್ನು ಕನ್ನಡ ಸಾಹಿತ್ಯ ಪರಿಷತ್ತಿಗೆ ಬರಮಾಡಿಕೊಂಡು ತಮಗೆ ನಮ್ಮ ಕೃತಜ್ಞತೆಯನ್ನು ಸಲ್ಲಿಸುವ ಭಾಗ್ಯ ದೊರೆತುದಕ್ಕಾಗಿ ಬಹಳ ಆನಂದವಾಗಿದೆ. ತಾವು ನಮ್ಮಲ್ಲಿ ವಿಶ್ವಾಸವಿಟ್ಟು ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಈ ವೃದ್ಧಾಪ್ಯದಲ್ಲಿ ಇಲ್ಲಿಗೆ ದಯಮಾಡಿಸಿ ನಮ್ಮ ಇಷ್ಟಾರ್ಥವನ್ನು ಸಲ್ಲಿಸಿದುದಕ್ಕಾಗಿ ನಾವು ತಮಗೆ ಅತ್ಯಂತ ಕೃತಜ್ಞರಾಗಿದ್ದೇವೆ.

ತಾವು ಉತ್ತರ ಕರ್ನಾಟಕದ ಐತಿಹಾಸಿಕ ಮತ್ತು ಪ್ರಾಚೀನ ಪಟ್ಟಣಗಳಲ್ಲೊಂದಾದ ಗೋಕಾಕನಗರದಲ್ಲಿ ಸದಾಚಾರ ಸಂಪನ್ನವಾದ ಉತ್ತಮ ಕುಟುಂಬದಲ್ಲಿ ಜನ್ಮ ತಾಳಿ ಅಲ್ಲಿಯೇ ತಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದ ಬಹು ಭಾಗವನ್ನು ಮುಗಿಸಿ ಮಾಧ್ಯಮಿಕ ಶಿಕ್ಷಣದ ಮುಂದಿನ ಭಾಗವನ್ನು ಬೆಳಗಾವಿಯಲ್ಲಿಯೂ, ಉಚ್ಚಶಿಕ್ಷಣವನ್ನು ಪುಣೆಯ ಡೆಕ್ಕನ್ ಕಾಲೇಜಿನಲ್ಲಿಯೂ ಪೂರೈಸಿ ೧೯೦೮ರಲ್ಲಿ ಬಿ.ಎ. ಪರೀಕ್ಷೆಯಲ್ಲಿಯೂ, ೧೯೧೧ರಲ್ಲಿ ಎಲ್‌ಎಲ್.ಬಿ. ಪರೀಕ್ಷೆಯಲ್ಲಿಯೂ ಉತ್ತೀರ್ಣರಾದಿರಿ. ಎಲ್‌ಎಲ್.ಬಿ. ಪರೀಕ್ಷೆಯಲ್ಲಿ ಉತ್ತಮ ತರಗತಿಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಾಗಿ ಲಿಂಗಾಯತ ಸಮಾಜದವರಿಟ್ಟ ವಿಕ್ಟೋರಿಯಾ ಜ್ಯೂಬಿಲಿ ಬಹುಮಾನವನ್ನು ತಾವು ಪಡೆದಿರಿ.

ಸುಮಾರು ೫೦ ವರ್ಷಗಳ ಹಿಂದೆ ಲಿಂಗಾಯತ ಸಮಾಜವು ವಿದ್ಯೆಯಲ್ಲಿ ಸಾಕಷ್ಟು ಪ್ರಗತಿಯನ್ನು ಹೊಂದಿರಲಿಲ್ಲ. ಅದಕ್ಕಾಗಿ ಸ್ಥಾಪಿತವಾದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಕಾರ್ಯವಾಹಕರಾಗಿ ತಾವು ಬಹು ಶ್ಲಾಘ್ಯವಾದ ಸೇವೆಯನ್ನು ಸಲ್ಲಿಸಿದಿರಿ. ಆ ಕಾಲದಲ್ಲಿ ಲಿಂಗಾಯತ ಸಮಾಜದ ಬಗೆಗೆ ಇದ್ದ ಕೆಲವು ತಪ್ಪು ಕಲ್ಪನೆಗಳನ್ನು ದೂರ ಮಾಡಲು ಯತ್ನಮಾಡಿದಿರಿ. ಕೈಲಾಸವಾಸಿ ಶಿರಸಂಗಿ ಲಿಂಗರಾಜರ ಪರಿಶ್ರಮದಿಂದ ಸ್ಥಾಪಿತವಾಗಿ ಸಮಾಜದ ಸಂಘಟನೆಯ ಬಗ್ಗೆ ಸುವ್ಯವಸ್ಥೆಯಿಂದ ನಡೆದ ವೀರಶೈವ ಮಹಾಸಭೆಯ ಕಾರ್ಯದಲ್ಲಿ ತಾವು ಪ್ರಮುಖಪಾತ್ರ ವಹಿಸಿದಿರಿ.

ತಾವು ಕೈಕೊಂಡ ಲೋಕೋಪಯೋಗದ ಕಾರ್ಯಗಳನ್ನು ಗಮನಿಸಿ ಸರಕಾರದವರು ತಮ್ಮನ್ನು ನ್ಯಾಯಾಧೀಶರೆಂದು ನಿಯಮಿಸಿದರು. ೧೯೧೭ರಿಂದ ೧೯೩೩ರ ವರೆಗೆ ಒಳ್ಳೇ ನ್ಯಾಯನಿಷ್ಠುರತೆಯಿಂದ ಕೆಲಸ ಮಾಡಿ ಆದರ್ಶ ನ್ಯಾಯಾಧೀಶರೆಂದು ಜನತೆ ಮತ್ತು ಸರಕಾರಗಳಲ್ಲಿ ಖ್ಯಾತಿಯನ್ನು ಹೊಂದಿ ನಿವೃತ್ತರಾದಿರಿ.

ಉತ್ತರಕರ್ನಾಟಕದಲ್ಲಿ ಆಗ ಇದ್ದ ಉಚ್ಚಶಿಕ್ಷಣದ ಕೊರತೆಯನ್ನು ಕಂಡು ಅದನ್ನು ದೂರಮಾಡಲು ತನುಮನಧನಗಳಿಂದ ಹೆಣಗಿದಿರಿ. ಲಿಂಗರಾಜ ಕಾಲೇಜನ್ನು ಸ್ಥಾಪಿಸುವ ಮಹತ್ಕಾರ್ಯದಲ್ಲಿ ಬಹು ಶ್ರಮಪಟ್ಟು ಅದರ ವ್ಯವಸ್ಥಾಪಕ ಮಂಡಲದ ಸದಸ್ಯರಾಗಿ ೧೯೩೩ರಿಂದ ೧೯೪೪ರ ವರೆಗೆ ಆ ಕಾಲೇಜನ್ನು ಸುಸ್ಥಿತಿಗೆ ತರಲು ಕಾರಣರಾದಿರಿ. ಆಮೇಲೆ ವಿದ್ಯೆಯಲ್ಲಿ ಹಿಂದುಳಿದ ವಿಜಾಪೂರ ಜಿಲ್ಲೆಯಲ್ಲಿ ವಿದ್ಯಾಪ್ರಸಾರಕ್ಕಾಗಿ ಹೆಣಗುತ್ತಿರುವ ಬಸವೇಶ್ವರ ವಿದ್ಯಾವರ್ಧಕ ಸಂಘದ ಬಸವೇಶ್ವರ ಕಾಲೇಜಿನ ವ್ಯವಸ್ಥಾಪಕ ಮಂಡಲದ ಸದಸ್ಯರಾಗಿ ಕೆಲಸಮಾಡಿದಿರಿ.

ಕನ್ನಡಿಗರು ಮರೆತ ತಮ್ಮ ನಾಡಿನ ಸಂಸ್ಕೃತಿಯನ್ನೂ ಗತವೈಭವವನ್ನೂ ಅವರಲ್ಲಿ ಬಿಂಬಿಸಲು ತಾವು ಸತತ ಪ್ರಯತ್ನಿಸುತ್ತಿರುವಿರಿ. ೧೯೩೬ರಲ್ಲಿ ಜರುಗಿದ ವಿಜಯನಗರದ ಷಟ್‌ಸಾಂವತ್ಸರಿಕ ಮಹೋತ್ಸವವು ತಮ್ಮ ಪ್ರಭಾವ ಪರಿಪೂರ್ಣ ದಿಗ್ದರ್ಶನದಿಂದ ಯಶಸ್ವಿಯಾಯಿತೆಂಬುದನ್ನು ಕನ್ನಡಿಗರು ಎಂದೂ ಮರೆಯುವಂತಿಲ್ಲ. ಧಾರವಾಡದಲ್ಲಿರುವ ಕರ್ನಾಟಕ ಇತಿಹಾಸ ಸಂಶೋಧನ ಮಂಡಲದ ಅಧ್ವರ್ಯುಗಳಾಗಿ ಕಳೆದ ಹತ್ತು ವರ್ಷಗಳಿಂದ ದುಡಿಯುತ್ತಿರುವಿರಿ. ಧಾರವಾಡದ ವಿದ್ಯಾವರ್ಧಕ ಸಂಘದ ಕಾರ್ಯನಿರ್ವಾಹಕ ಮಂಡಲದ ಅಧ್ಯಕ್ಷರಾಗಿ ಕೆಲವು ವರ್ಷ ಕೆಲಸ ಮಾಡಿದಿರಿ. ಉತ್ತರ ಕರ್ನಾಟಕದ ಇತಿಹಾಸದಲ್ಲಿ ಜಾಜ್ವಲ್ಯಮಾನವಾದ ಸ್ತ್ರೀರತ್ನ ಕಿತ್ತೂರ ಚೆನ್ನಮ್ಮರಾಣಿಯ ಸ್ಮಾರಕ ಇತಿಹಾಸ ಮಂಡಲದ ಅಧ್ಯಕ್ಷರಾಗಿ ಕೆಲವು ಗ್ರಂಥಗಳನ್ನು ಪ್ರಕಟಿಸಿರುವಿರಿ.

ಸಾಹಿತ್ಯಕ್ಷೇತ್ರದಲ್ಲಿಯೂ ತಮ್ಮ ಪರಿಶ್ರಮವು ಘನವಾದುದು. ತಾವು ಸುಮಾರು ಅರ್ಧಶತಮಾನದ ಹಿಂದೆ ವಿಜಯನಗರ ಸಾಮ್ರಾಜ್ಯವೆಂಬ ಗ್ರಂಥವನ್ನು ಬರೆದು ಗತಿಸಿದ ಮಹಾಸಾಮ್ರಾಜ್ಯದ ಕಲ್ಪನೆಯನ್ನು ಜನತೆಗೆ ಮಾಡಿಕೊಟ್ಟಿರಿ. ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯಲ್ಲಿ ವಾಙ್ಮಯ ಶಾಖೆಯನ್ನು ಸ್ಥಾಪಿಸಿ ಅದರ ಅಧ್ವರ್ಯುಗಳಾಗಿ ಕನ್ನಡ ಸಾಹಿತ್ಯದ ಅಮೌಲ್ಯ ಗ್ರಂಥಗಳನ್ನು ಸಂಸ್ಕರಿಸಿ ಪ್ರಕಟಿಸಲು ಕಾರಣರಾದಿರಿ. ವಿರೂಪಾಕ್ಷ ಪಂಡಿತನ **ಚೆನ್ನಬಸವ ಪುರಾಣ**ದಂತಹ ಉದ್ಗ್ರಂಥವನ್ನು ಕೇವಲ ಎರಡೇ ವರ್ಷಗಳಲ್ಲಿ ಬಯಲಿಗೆ ತಂದ ಶ್ರೇಯಸ್ಸು ತಮ್ಮದು. **ಹ್ಯಾಂಡ್ ಬುಕ್ ಆಫ್ ವೀರಶೈವಿಸಂ** (Hand-book of Veera-saivism), **ಗಿರಿಜಾ ಕಲ್ಯಾಣ, ಶಬರಶಂಕರ ವಿಲಾಸ, ಪ್ರಭುಲಿಂಗ ಲೀಲೆ** ಮೊದಲಾದ ಗ್ರಂಥಗಳು ಬೆಳಕಿಗೆ ಬಂದುದು ತಮ್ಮ ಪ್ರೋತ್ಸಾಹದಿಂದಲೇ. **ಶಂಕರ ದಾಸಿಮಾರ್ಯ ಪುರಾಣ**ವೆಂಬ ಪ್ರಾಚೀನ ಗ್ರಂಥವನ್ನು ಸ್ವತಃ ಸಂಸ್ಕರಿಸಿ ಅಚ್ಚುಮಾಡಿ ಅದರ ಬಾಧ್ಯತೆಯನ್ನು ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಗೆ ಕೊಟ್ಟಿರುವಿರಿ. **ನೋಳಿಗೆಯ ಮಾರಯ್ಯ ಮತ್ತು ರಾಣಿ ಮಹಾದೇವಿಯರ ವಚನಗ್ರಂಥವನ್ನೂ ನೋಳಿಗೆಯ ಮಾರಯ್ಯನ ಪುರಾಣವನ್ನೂ** ಮುದ್ರಿಸಿ ಪ್ರಕಟಿಸುವ ಹೊಣೆಯನ್ನೂ ಹೊತ್ತಿರುವಿರಿ.

ಮಹನೀಯರೆ, ತಾವು ಯಾವ ಬಗೆಯ ಪ್ರತಿಷ್ಠೆಯನ್ನೂ ಸ್ಥಾನಮಾನಗಳನ್ನೂ ಬಯಸದೆ, ಎಲೆಯ ಮರೆಯ ಕಾಯಿಯಂತೆ ಕನ್ನಡ ನಾಡಿನ ಹೆಚ್ಚಳಕ್ಕಾಗಿ ದೇಹವನ್ನು ಮುಡಿಪಾಗಿಟ್ಟ ಮಹಾಪುರುಷರಲ್ಲಿ ತಮ್ಮ ಸ್ಥಾನವು ಉಚ್ಚವಾದುದೆಂದು ಹೇಳಲು ಹೆಮ್ಮೆಪಡುತ್ತೇವೆ. ತಾವು ಲೋಕೋಪಕಾರಕ್ಕಾಗಿ ದೇಹವನ್ನು ಸವೆಸುತ್ತಿರುವ ಕರ್ಮಯೋಗಿಗಳು. ತಮ್ಮ ಕರ್ತವ್ಯನಿಷ್ಠೆ, ಧ್ಯೇಯದಲ್ಲಿ ದೃಢವಿಶ್ವಾಸ, ಅಚಲವಾದ ಸತ್ಯಪ್ರಿಯತೆ, ಸೌಜನ್ಯ ಮತ್ತು ಸಾತ್ವಿಕಭಾವ ಇವು ಮುಂದಿನ ಪೀಳಿಗೆಗೆ ಅನುಕರಣೀಯವಾಗಿವೆ.

ಪರಮಾತ್ಮನು ತಮಗೆ ಇತೋಽಪ್ಯತಿಶಯವಾದ ಆಯುರಾರೋಗ್ಯಗಳನ್ನು ದಯಪಾಲಿಸಿ ತಮ್ಮಿಂದ ನಾಡು ನುಡಿಗಳ ಅಭಿವೃದ್ಧಿಗೆ ಸಹಾಯವಾಗುವಂತೆ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಇಂತು

ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರು

# ಕನ್ನಡ ಸಾಹಿತ್ಯ ಪರಿಷತ್ತು

## ಶ್ರೀ ವೀರಭದ್ರಪ್ಪ ಹಾಲಭಾವಿ ಅವರಿಗೆ ಅರ್ಪಿಸಿದ ಮಾನಪತ್ರದ ಬಗ್ಗೆ ಪ್ರತ್ಯುತ್ತರವಾಗಿ ಶ್ರೀಯುತರು ಮಾಡಿದ ಭಾಷಣ

ತಾವು ಈಗ ನನಗೆ ಸದಯಾಂತಃಕರಣದಿಂದ ಕೊಟ್ಟ ಮಾನಪತ್ರದ ಬಗ್ಗೆ ನನ್ನ ಕೃತಜ್ಞತೆಯನ್ನು ಒಂದೆರಡು ಮಾತುಗಳಲ್ಲಿ ತೋರಿಸಿ ನನ್ನ ಭಾಷಣವನ್ನು ಮುಗಿಸಬಹುದು. ಆದರೆ ಅದರ ಜೊತೆಗೆ ನನ್ನ ಪ್ರಾಥಮಿಕ ಶಿಕ್ಷಣದ ಮತ್ತು ಇತರ ಕೆಲವು ಸಂಗತಿಗಳನ್ನು ಹೇಳುವುದು ಅಪ್ರಾಸಂಗಿಕವಾಗಲಾರದೆಂದು ಎಣಿಸುತ್ತೇನೆ.

ನನ್ನ ಹುಟ್ಟೂರು ಬೆಳಗಾವ ಜಿಲ್ಲೆಯ ಒಂದು ತಾಲೂಕ ಸ್ಥಳವಾದ ಗೋಕಾವಿ. ಅಲ್ಲಿ ನನ್ನ ಪ್ರಾಥಮಿಕ ಶಿಕ್ಷಣ ಆರಂಭವಾದದ್ದು ಸುಮಾರು ೧೮೮೫ ರಲ್ಲಿ. ಅಲ್ಲಿ ಕನ್ನಡ ಶಾಲೆಗಳು ಆರಂಭವಾಗಿ ಸುಮಾರು ೨೦ ವರ್ಷಗಳಾಗಿರಬಹುದು. ಆದರೂ ಅಭ್ಯಾಸಕ್ರಮದಲ್ಲಿ ಕೆಲವು ಮರಾಠಿ ವಿಷಯಗಳೂ ಸೇರಿದ್ದವು. ಇದರ ಕಾರಣವನ್ನು ತಿಳಿದುಕೊಳ್ಳುವ ಕುತೂಹಲವು ತಮ್ಮಲ್ಲಿ ಕೆಲವರಿಗೆ ಉಂಟಾಗಬಹುದು. ಈ ಕಾರಣವು ನಾನೇ ಬರೆದ ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ೧೯೧೪-೧೫ನೇ ಸಾಲಿನ ವರದಿಯ ೧-೨ ನೇ ಪುಟಗಳ ಮೇಲಿನ ವಿವರಣೆಯಿಂದ ವಿದಿತವಾಗುವುದು. ಇದನ್ನು ಓದಿ ತೋರಿಸಲಿಕ್ಕೆ ತಮ್ಮ ಅಪ್ಪಣೆಯನ್ನು ಬೇಡುತ್ತೇನೆ.

Till a long time after the British rule was firmly established in this part of the country, the education of the masses was not systematically taken up by the Government. It was in the year 1858 that the system of vernacular education was first organised, and it was not till 1865, when Mr. Russell took charge of the Southern Division of the presidency as Educational Inspector, that any serious attempt was made by any body in the official circle to ascertain the real vernacular of this part of the presidency. Its condition can best be described in the words of an eminent educa-

tionist of the Bombay Karnatak :—" At the time when Mr. Russell took charge of the Southern Division, it was in such a condition as to throw any foreigner like him in great confusion as to its real vernacular which he had to train. Most people that came into contact with European Officers were Marathi men, and Marathi was taught in Government Schools in preference to Kanarese. The language taught in private schools was Marathi and the parents of students in Government Schools urged on educational authorities to teach Marathi to their children. No body in the official circle thought that the Kanarese language had any pretension to culture or possessed any literature of its own, while the whole Mass of population spoke Kanarese, the study of its literature being confined to a few Lingayat priests only."

ಈ ಸ್ಥಿತಿಯಲ್ಲಿ ಮುಂಬಯಿ ಇಲಾಖೆಯ ದಕ್ಷಿಣ ಭಾಗದಲ್ಲಿ ಕನ್ನಡ ಶಾಲೆಗಳು ಆರಂಭವಾದಾಗ ಅವುಗಳ ಶಿಕ್ಷಣಕ್ರಮದಲ್ಲಿ ಕೆಲವು ಮರಾಠಿ ವಿಷಯಗಳು ಸೇರಿರುವುದು ಸಹಜ. ನಾನು ಕಲಿಯಲಿಕ್ಕೆ ಆರಂಭ ಮಾಡಿದಾಗ ಅಂಕೆ ಮಗ್ಗಿಗಳು ಮರಾಠಿಯಲ್ಲಿಯೇ ಕಲಿಸಲ್ಪಡುತ್ತಿದ್ದು ಮೊದಲಿನ ನಾಲ್ಕು ವರ್ಗಗಳಲ್ಲಿ ಮೋಡೀವಾಚನದ ಪಠ್ಯಪುಸ್ತಕಗಳನ್ನು ಸಹ ಓದಿಸುತ್ತಿದ್ದರು. ಇದರ ಪರಿಣಾಮವಾಗಿ ನನಗೆ ಈಗ್ಯೂ ಮಗ್ಗಿಗಳನ್ನು ಮರಾಠಿಯಲ್ಲಿ ಅನ್ನುವದು ನಿರರ್ಗಳವಾಗಿ ಬರುವಷ್ಟು ಅವುಗಳನ್ನು ಕನ್ನಡದಲ್ಲಿ ಅನ್ನಲಿಕ್ಕೆ ಬರುವುದಿಲ್ಲ. ನಾಲ್ಕನೆಯ ವರ್ಗದ ಅಭ್ಯಾಸವು ಮುಗಿದ ಮೇಲೆ ಆಂಗ್ಲೋ-ವರ್ನ್ಯಾಕ್ಯುಲರ ಶಾಲೆಯ ಮೊದಲನೆಯ ಮೂರು ವರ್ಗಗಳಲ್ಲಿ ಮಾತ್ರ ನನ್ನ ಕನ್ನಡ ಅಭ್ಯಾಸವು ಮುಂದುವರಿಯಿತು. ಆಮೇಲೆ ಕನ್ನಡದ ಬದಲಾಗಿ ಸಂಸ್ಕೃತವು ಬಂದು ಉಳಿದ ವಿಷಯಗಳೆಲ್ಲ ಇಂಗ್ಲೀಷದಲ್ಲೇ ನಡೆದವು. ಮುಂದೆ ಕಾಲೇಜ ಶಿಕ್ಷಣವು ಪುಣೆಯ ಡೆಕ್ಕನ ಕಾಲೇಜಿನಲ್ಲಿ ನಡೆದು ಆಗ ಈ ಭಾಗದ ಕೆಲವು ವಿದ್ಯಾರ್ಥಿಗಳು ತಮ್ಮ ಮಾತೃಭಾಷೆಯಾದ ಕನ್ನಡವನ್ನು ಮರೆತುಬಿಡುವಷ್ಟು ಸಸ ಪ್ರಸಂಗ ಒದಗಿತು. ನಾನು ಬಿ.ಎ. ಪರೀಕ್ಷೆಯನ್ನು ಮುಗಿಸಿದ ಕಾಲಕ್ಕೆ ಮುಂಬೈ ವಿಶ್ವವಿದ್ಯಾನಿಲಯದವರು ಎಂ.ಎ. ವರ್ಗದಲ್ಲಿ ಮಾತ್ರ ಪ್ರಾದೇಶಿಕ ಭಾಷೆಗಳನ್ನು ಐಚ್ಛಿಕ ವಿಷಯವಾಗಿ ಸೇರಿಸಿದರು. ನಾನು ಕನ್ನಡವನ್ನು ತೆಗೆದುಕೊಂಡು ಎಂ.ಎ. ಅಭ್ಯಾಸ ಮಾಡಬೇಕೆಂದು ಬಯಸಿದರೂ ಕೆಲವು ಕಾರಣಗಳ ಮೂಲಕ ಅದನ್ನು ಬಿಡಬೇಕಾಯಿತು. ಆಮೇಲೆ ಎಲ್‌ಎಲ್.ಬಿ. ಪರೀಕ್ಷೆಯನ್ನು ತೀರಿಸಿದ ಮೇಲೆ ನನ್ನ ವಕೀಲವೃತ್ತಿಯನ್ನು ಧಾರವಾಡದಲ್ಲಿ ನಡೆಸಲಿಕ್ಕೆ ಬಂದಾಗ ಅಲ್ಲಿಯ ಕನ್ನಡ ಅಭಿಮಾನಿಗಳ ಸಂಪರ್ಕದಿಂದ, ಅದರಲ್ಲಿ ವಿಶೇಷವಾಗಿ ವಿದ್ಯಾವರ್ಧಕ ಸಂಸ್ಥೆಯ ಸಂಬಂಧದಿಂದ, ನನ್ನ ಕನ್ನಡದ ವಾಙ್ಮಯದ ಅಭ್ಯಾಸಕ್ಕೆ ಆರಂಭವಾಯಿತು. ಆಗ Sewell's Forgotten Empire ಎಂಬ ವಿಜಯನಗರದ ಇತಿಹಾಸವನ್ನು ನಾನು ಕನ್ನಡದಲ್ಲಿ ಪರಿವರ್ತಿಸಿದ್ದು ವಿದ್ಯಾವರ್ಧಕ ಸಂಘವು ಪ್ರಕಟಿಸುತ್ತಿರುವ ವಾಗ್ಭೂಷಣ ಮಾಸಪತ್ರಿಕೆಯಲ್ಲಿ ಪ್ರಸಿದ್ಧಿಪಡೆಯಿತು.

ಮುಂದೆ ೬-೭ ವರ್ಷಗಳ ನಂತರ ನಾನು ಸರಕಾರೀ ನೌಕರಿಯನ್ನು ಸೇರಿದ ಮೇಲೆ ೧೯೩೩ನೇ ಇಸ್ವಿಯಲ್ಲಿ ಅದರಿಂದ ನಿವೃತ್ತವಾಗುವ ವರೆಗೆ ನನ್ನ ಕನ್ನಡ ಅಭ್ಯಾಸದಲ್ಲಿ ಹೆಚ್ಚಿನ ಪ್ರಗತಿಯಾಗಲಿಲ್ಲ. ಆ ಸುಮಾರಕ್ಕೆ ಧಾರವಾಡದ ಲಿಂ. ವಿ. ಸಂಸ್ಥೆಯ ಅಂಗವಾದ ಸಾಹಿತ್ಯ ಸಮಿತಿಯು ಅಸ್ತಿತ್ವದಲ್ಲಿ ಬಂತು. ನನ್ನ ಸುದೈವದಿಂದ ನಾನು ಸಮಿತಿಯ ಅಧ್ಯಕ್ಷನಾದೆನು. ಆ ಸಮಿತಿಯವರು ಚೆನ್ನಬಸವ ಪುರಾಣ ಮೊದಲಾದ ಪುರಾತನ ಗ್ರಂಥಗಳನ್ನು ಸಂಸ್ಕರಿಸಿ ಪ್ರಸಿದ್ಧಿಪಡಿಸಿದುದು ತಮ್ಮೆಲ್ಲರಿಗೆ ಗೊತ್ತೇ ಅದೆ. ಆ ಸಮಿತಿಯಲ್ಲಿ ಡಾ|| ನಂದೀಮಠ, ಪ್ರೊ|| ಬಸವನಾಳ ಇಂಥವರು ಸಭಾಸದರಿದ್ದರು. ಅವರ ಸಂಪರ್ಕದಿಂದ ನಾನು ಸಮಿತಿಯ ಕಾರ್ಯದಲ್ಲಿ ಅಳಿಲ ಸೇವೆಯನ್ನು ಮಾತ್ರ ಮಾಡಿದ್ದು.

ನನ್ನ ಆಯುಷ್ಯದಲ್ಲಿ ನಾನು ಸ್ವತಂತ್ರ ರೀತಿಯಿಂದ ಸಾಹಿತ್ಯದ ಕೆಲಸ ಮಾಡಿದ್ದು ೨|| ಗ್ರಂಥಗಳ ಬಗ್ಗೆ. ಒಂದು ಸುಮಾರು ೫೦ ವರ್ಷಗಳ ಹಿಂದೆ ಮೇಲೆ ಹೇಳಿದಂತೆ ವಿಜಯನಗರದ ಇತಿಹಾಸವನ್ನು ಕನ್ನಡದಲ್ಲಿ ಪರಿವರ್ತಿಸಿದ್ದು. ೨ನೆಯದು ೧೧ ವರ್ಷಗಳ ಹಿಂದೆ ಪ್ರಸಿದ್ಧಪಡಿಸಿದ ಶಂಕರದಾಸಿಮಯ್ಯನ ಪುರಾಣವು. ಆಮೇಲೆ ಹೋದವರ್ಷ ಮೋಳಿಗಯ್ಯನ ಪುರಾಣವನ್ನು ಸಂಸ್ಕರಿಸಿ ಪ್ರಕಟಮಾಡಿದ್ದರಲ್ಲಿ ಅದರ ಶ್ರೇಯಸ್ಸಿನ ಬಹುಭಾಗವು ಬೇರೊಬ್ಬರಿಗೆ ಸಲ್ಲುತ್ತದೆ. ಹೀಗೆ ನಾನು ಕಡ್ಡಿಯಷ್ಟು ಮಾಡಿದ ಸಾಹಿತ್ಯಸೇವೆಯನ್ನು ಗುಡ್ಡದಷ್ಟು ದೊಡ್ಡದಾಗಿ ಮಾಡಿ ಪರಿಷತ್ತಿನವರು ಅನಿರೀಕ್ಷಿತವಾಗಿ ಈ ರೀತಿ

ನನಗೆ ಮರ್ಯಾದೆಯನ್ನು ಮಾಡಿದ್ದು ಅವರ ಉದಾರಾಂತಃಕರಣದ ದ್ಯೋತಕವಾಗಿದೆ. ಮೇಲೆ ಹೇಳಿದಂತೆ ಡಾ॥ ನಂದೀಮಠ, ಪ್ರೊ॥ ಬಸವನಾಳ ಅದರಂತೆ ಪ್ರೊ॥ ಭೂಸನೂರಮಠ ಮತ್ತು ಚನ್ನಪ್ಪನವರು ಉತ್ತಂಗಿ ಇವರ ದಿವ್ಯ ಪ್ರಕಾಶದ ನೆರಳಲ್ಲಿ ನಿಂತವನು ನಾನು.

ಕನ್ನಡ ಸಾಹಿತ್ಯದ ಮೇಲೆ ನನ್ನ ಪ್ರೀತಿ ಇರುವುದೇನೋ ನಿಜ. ಈ ಕಾರಣವೇ

ವ್ಯತಿಷಜತಿ ಪದಾರ್ಥಾನಾಂತರಃ ಕೋಪಿ
ಹೇತುಃ ।
ನ ಖಲು ಬಹಿರೂಪಾಧೀನ್ ಪ್ರೀತಯಃ
ಸಂಶ್ರಯಂತಿ ॥

ಎಂಬ ಮಹಾಕವಿಯ ಉಕ್ತಿಯಂತೆ ನನಗೆ ಈ ಮನ್ನಣೆಯನ್ನು ಕೊಡಲು ಪರಿಷತ್ತಿನ ಸಭಾಸದರನ್ನು ಪ್ರೇರೇಪಿಸಿದಂತೆ ತೋರುತ್ತದೆ. ಕೆಲವು ಸಾರ್ವಜನಿಕ ಸಂಸ್ಥೆಗಳಲ್ಲಿ ನಾನು ಕಾರ್ಯ ಮಾಡಿದ ಬಗ್ಗೆ ಮಾನಪತ್ರದಲ್ಲಿ ಉಲ್ಲೇಖಿಸಿರುತ್ತದೆ. ಅವುಗಳಲ್ಲಿ ನಾನು ಹೇಳತಕ್ಕಂಥದ್ದೇನೂ ಮಾಡಿಲ್ಲವೆಂದು ನನ್ನ ಮನಃಸಾಕ್ಷಿಯಾಗಿ ಹೇಳುತ್ತೇನೆ. ಈ ಪ್ರಸಂಗದಲ್ಲಿ ನಾನು ಹಿಂದಕ್ಕೆ ಕಂಡ ಕೆಲವು ಹಳೆಯ ಪರಿಚಿತರನ್ನು ಈಗ ಮತ್ತೊಮ್ಮೆ ಕಾಣುವ ಸುಯೋಗವು ದೊರೆತದ್ದಕ್ಕಾಗಿ ವಿಶೇಷ ಆನಂದವೆನಿಸುತ್ತದೆ. ಇದನ್ನು ಒದಗಿಸಿಕೊಟ್ಟ ಸಾಹಿತ್ಯ ಪರಿಷತ್ತಿನ ಸಭಾಸದರಿಗೆ ನನ್ನ ಅನಂತ ವಂದನೆಗಳು.

ಕೊನೆಗೆ ತಾವು ಈ ರೀತಿ ಸನ್ಮಾನಮಾಡಿದ್ದಕ್ಕಾಗಿ ನನ್ನ ಹಾರ್ದಿಕ ಕೃತಜ್ಞತೆಯನ್ನು ಸಲ್ಲಿಸಿ ನನ್ನ ಮಾತು ಮುಗಿಸುತ್ತೇನೆ.

---

# ಸ್ವೀಕಾರ

**ಜೈನಧರ್ಮ :—** ಬರೆದವರು: ಶ್ರೀ ಮಿರ್ಜಿ ಅಣ್ಣಾರಾಯರು; ಪ್ರಕಾಶಕರು: ಶಾಂತಿಸೇವಾ ಸದನ, ಸೇಡಬಾಳ; ಡೆಮ್ಮಿ ಎಂಟರ ಆಕಾರ; ಪುಟ: ೪೪ + ೯೧೩ ಬೆಲೆ: ರೂ. ೧೫-೦-೦

**ಮೊನ್ನವನ್ನ :—** (ನಾಟಕ) ಬರೆದವರು: ಶ್ರೀ ಎಸ್. ಜಿ. ಶಾಸ್ತ್ರಿಗಳು; ಪ್ರಕಾಶಕರು: ಕರ್ಣಾಟಕ ಸಂಘ ಸೆಂಟ್ರಲ್ ಕಾಲೇಜ್, ಬೆಂಗಳೂರು ೧. ಕಿರೀಟಾಕಾರದ ಅಷ್ಟಪತ್ರ; ಪುಟ: ೧೮೦ ಉತ್ತಮಪ್ರತಿ: ರೂ. ೩-೦-೦. ಸಾಮಾನ್ಯ ಪ್ರತಿ: ರೂ. ೨-೦-೦

**ನಾಗನ ಪದಗಳು :—** (ಪದ್ಯ) ಬರೆದವರು: ಶ್ರೀ ಜಿ. ಪಿ. ರಾಜರತ್ನಂ ಅವರು; ಪ್ರಕಾಶಕರು: ಕರ್ಣಾಟಕ ಸಂಘ ಸೆಂಟ್ರಲ್ ಕಾಲೇಜ್, ಬೆಂಗಳೂರು ೧; ಕಿರೀಟಾಕಾರದ ಅಷ್ಟಪತ್ರ; ಪುಟ: ೮೦ ಉತ್ತಮಪ್ರತಿ: ರೂ. ೨-೪-೦. ಸಾಮಾನ್ಯ ಪ್ರತಿ: ರೂ. ೧-೪-೦

**ಶ್ರೀ ಕೈಲಾಸಂ ಸ್ಮರಣೆ :—** ಬರೆದವರು: ಶ್ರೀ ಕೆ. ವಿ. ಅಯ್ಯರ್ ಅವರು; ಪ್ರಕಾಶಕರು: ಕರ್ಣಾಟಕ ಸಂಘ ಸೆಂಟ್ರಲ್ ಕಾಲೇಜ್, ಬೆಂಗಳೂರು ೧. ಕಿರೀಟಾಕಾರದ ಅಷ್ಟಪತ್ರ; ಪುಟ: XV1 + ೧೬೦ ಬೆಲೆ: ಉತ್ತಮಪ್ರತಿ: ರೂ. ೩-೪-೦. ಸಾಮಾನ್ಯ ಪ್ರತಿ: ರೂ. ೨-೪-೦

**ಅಮೃತವಾಣಿ ಹಾಗೂ ಶಾಲಾ ಗೀತೆಗಳು :—** ಸಂಪಾದಕರು: ಶ್ರೀ ಎಂ. ಕೆ. ಚಿಕ್ಕಮಠ ಅವರು; ಪ್ರಕಾಶಕರು: ಶ್ರೀ ಶಿ. ಶಿ. ಹಿರೇಮಠ ಅವರು; ಫೂಲ್ಸ್‌ಕೇಪ್ ಎಂಟರ ಆಕಾರ; ಪುಟ: ೭೨ ಬೆಲೆ: ರೂ. ೦-೮-೦

*** ಕರ್ಣಾಟಕ ಮಾಲವಿಕಾಗ್ನಿಮಿತ್ರ ನಾಟಕಂ :—** ಬರೆದವರು: ಆಸ್ಥಾನವಿದ್ವಾನ್ ಮೋಟಗಾನಹಳ್ಳಿ ಶಂ. ಸುಬ್ರಹ್ಮಣ್ಯಶಾಸ್ತ್ರಿಗಳು, ಪ್ರಕಾಶಕರು: ಕರ್ನಾಟಕ ಸಂಘ, ಸೆಂಟ್ರಲ್ ಕಾಲೇಜ್, ಬೆಂಗಳೂರು ೧. ಕಿರೀಟಾಕಾರಾದ ಅಷ್ಟಪತ್ರ; ಪುಟ: ೧೫ + ೯೨ ಉತ್ತಮಪ್ರತಿ: ರೂ. ೨-೧೨-೦. ಸಾಮಾನ್ಯ ಪ್ರತಿ: ರೂ. ೧-೧೨-೦

***ಸ್ನೇಹ-ಸೂಕ್ತಿ :—** (ಪದ್ಯ) ಬರೆದವರು: ಶ್ರೀ "ಹೇಮಂತ" ಪ್ರಕಾಶಕರು: ಸಾಹಿತ್ಯ ನಿಕೇತನ, ಹೈದರಾಬಾದು; ಕಿರೀಟಾಕಾರದ ಅಷ್ಟಪತ್ರ; ಪುಟ: ೮೯ ರೂ. ೧-೮-೦

***ಕನ್ನಡ ಗೀತಾಂಜಲಿ :—** ಅನುವಾದಕರು: ಶ್ರೀ ನರೇಗಲ್ಲ ಪ್ರಲ್ಹಾದರಾಯರು; ಪ್ರಕಾಶಕರು: ಮಿಂಚಿನಬಳ್ಳಿ ಧಾರವಾಡ ಅವರು; ಕಿರೀಟಾಕಾರದ ಅಷ್ಟಪತ್ರ; ಪುಟ: ೧೪೪ ಬೆಲೆ: ಉತ್ತಮಪ್ರತಿ: ರೂ. ೨-೮-೦. ಸಾದಾಪ್ರತಿ: ರೂ. ೨-೦-೦

**ಕಾಮಸ್ವಾಸ್ಥ್ಯ :—** ಬರೆದವರು: ಶ್ರೀ ಕಲಮದಾನಿ ಗುರುರಾಯರು; ಪ್ರಕಾಶಕರು: ಸಂಜೀವಿನಿ ಪ್ರಕಾಶನ ಹುಬ್ಬಳ್ಳಿ, ಕಿರೀಟಾಕಾರದ ಅಷ್ಟಪತ್ರ; ಪುಟ: ೮೬ ಬೆಲೆ: ರೂ. ೧-೮-೦

**ಸಿಡಿದ ಕಿಡಿಗಳು :—** (ಹರಟೆ) ಕುಂಜಾಲ್ ಶಾಂತಾರಾಂ ಅವರು; ಪ್ರಕಾಶಕರು: ಸಂಜೀವಿನಿ ಪ್ರಕಾಶನ ಹುಬ್ಬಳ್ಳಿ, ಕಿರೀಟಾಕಾರದ ಅಷ್ಟಪತ್ರ; ಪುಟ: ೯೮ ಬೆಲೆ: ರೂ. ೧-೮-೦

**ಆಕೆಯಾರು ? :—** ಬರೆದವರು: ಶ್ರೀ ಎಂ. ಎನ್. ಮೂರ್ತಿ ರಾವ್ ಅವರು; ಪ್ರಕಾಶಕರು: ಸಂಜೀವಿನಿ ಪ್ರಕಾಶನ ಹುಬ್ಬಳ್ಳಿ; ಕಿರೀಟಾಕಾರದ ಅಷ್ಟಪತ್ರ; ಪುಟ: ೧೦೮ ಬೆಲೆ: ರೂ. ೧-೦-೦

**ಯವನ ಸ್ವೈರಂಧ್ರೀ:**—ಬರೆದವರು: ಕೆರೂರ ವಾಸುದೇವಾಚಾರ್ಯರು; ಪ್ರಕಾಶಕರು; ಶ್ರೀ ಧೀರೇಂದ್ರ ವಾಸುದೇವಾಚಾರ್ಯ ಕೆರೂರ ಅವರು; ಬಾಗಲಕೋಟೆ. ಕಿರೀಟಾಕಾರದ ಅಷ್ಟಪತ್ರ; ಪುಟ: ೨೨೫ ಬೆಲೆ: ರೂ. ೨-೪-೦

**ಸೇಬಿನ ಗಿಡ:**— ಬರೆದವರು: ಶ್ರೀ ರಾಜಲಕ್ಷ್ಮಿ; ಪ್ರಕಾಶಕರು: ಸಂಜೀವಿನಿ ಪ್ರಕಾಶನ ಹುಬ್ಬಳ್ಳಿ; ಕಿರೀಟಾಕಾರದ ಅಷ್ಟಪತ್ರ; ಪುಟ: ೧೯೯ ಬೆಲೆ: ರೂ. ೧-೮-೦

**ಪುರಂದರ ದಾಸರ ಕೀರ್ತನೆ:**— ಉಪಾಧ್ಯಾಯ ಪ್ರಕಟನಾಲಯ, ಚಿಕ್ಕಪೇಟೆ, ಬೆಂಗಳೂರು; ಕಿರೀಟಾಕಾರದ ಅಷ್ಟಪತ್ರ; ಪುಟ: ೬೮ ಬೆಲೆ: ರೂ. ೦-೧೦-೦

***ರಾಧೇಯ:**— ಬರೆದವರು: ಶ್ರೀ ಕೃಷ್ಣಮೂರ್ತಿ ಪುರಾಣಿಕ ಅವರು; ಪ್ರಕಾಶಕರು: ಸಾಹಿತ್ಯ ಸೇವಾ ಮಂದಿರ ಗೋಕಾಕ; ಕಿರೀಟಾಕಾರದ ಅಷ್ಟಪತ್ರ; ಪುಟ: ೫೬ ಬೆಲೆ: ರೂ. ೧-೪-೦

***ವರುಣ:**— ಬರೆದವರು: ದಿ|| ಪೇಜಾವರ ಸದಾಶಿವ ರಾಯರು; ಪ್ರಕಾಶಕರು: ಕಾವ್ಯಪ್ರಕಾಶನ ಸಮಿತಿ ಸಾಂಗಲಿ; ಕಿರೀಟಾಕಾರದ ಅಷ್ಟಪತ್ರ; ಪುಟ: ೯೩ ಬೆಲೆ: ರೂ. ೧-೪-೦

**ಅನುಭವ ಮಂಟಪದ ಐತಿಹಾಸಿಕತೆ:**— ಸಂಶೋಧಕರು: ಶ್ರೀ ಚೆನ್ನಪ್ಪ ಉತ್ತಂಗಿ ಅವರು; ಪ್ರಕಾಶಕರು: ಶ್ರೀ ವೀರಭದ್ರಪ್ಪ ಹಾಲಬಾವಿ, ನಿವೃತ್ತ ೧ನೆಯ ವರ್ಗ ನ್ಯಾಯಾಧೀಶರು; ಧಾರವಾಡ ಕಿರೀಟಾಕಾರದ ಅಷ್ಟಪತ್ರ; ಪುಟ: ೧೧೨ ಬೆಲೆ: ರೂ. ೧-೮-೦

***ಶ್ರೀ ಕುವೆಂಪು ಸಂದರ್ಶನ:**— ಸಂಪಾದಕರು: ಶ್ರೀ ಕೋ. ಚೆನ್ನಬಸಪ್ಪನವರು; ಪ್ರಕಾಶಕರು: ಸಜೀವ ಸಾಹಿತ್ಯ ಮಾಲೆ, ಬಳ್ಳಾರಿ; ಕಿರೀಟಾಕಾರದ ಅಷ್ಟಪತ್ರ; ಪುಟ: ೧೦೭ ಬೆಲೆ: ರೂ. ೧-೧೨-೦

**ಬೆಳಗಿದ ದೀಪಗಳು:**— ಬರೆದವರು: ಶ್ರೀ ಕೆರೂರು ವಾಸುದೇವಾಚಾರ್ಯರು ಪ್ರಕಾಶಕರು: ಧೀರೇಂದ್ರ ವಾಸುದೇವಾಚಾರ್ಯ ಕೆರೂರ ಅವರು; ಬಾಗಲಕೋಟೆ; ಕಿರೀಟಾಕಾರದ ಅಷ್ಟಪತ್ರ; ಪುಟ: ೧೭೦ ಬೆಲೆ: ರೂ. ೧-೧೨-೦

**ಪ್ರೇಮವಿಜಯ:**— ಬರೆದವರು: ಶ್ರೀ ಕೆರೂರು ವಾಸುದೇವಾಚಾರ್ಯರು: ಪ್ರಕಾಶಕರು: ಧೀರೇಂದ್ರ ವಾಸುದೇವಾಚಾರ್ಯ ಕೆರೂರ ಅವರು; ಕಿರೀಟಾಕಾರದ ಅಷ್ಟಪತ್ರ; ಪುಟ: ೨೩೨ ಬೆಲೆ: ರೂ. ೨-೮-೦

***ಅಮರ ಜ್ಯೋತಿ:**— ಬರೆದವರು: ಶ್ರೀ ವಿ. ಕೆ. ಕರಡಿ ಅವರು; ಪ್ರಕಾಶಕರು: ವೀರಶೈವ ಸಾಹಿತ್ಯ ಸಂಸ್ಕೃತಿ ಪ್ರಕಾಶನ ಸಮಿತಿ, ಬೆಳಗಾವಿ. ಫೂಲ್ಸ್‌ಕ್ಯಾಪ್ ಎಂಟರ ಆಕಾರ ಪುಟ: ೧೮ ಬೆಲೆ: ರೂ. ೦-೬-೦

**ತೊಳೆದ ಮುತ್ತು:**— ಬರೆದವರು: ಶ್ರೀ ಕೆರೂರು ವಾಸುದೇವಾಚಾರ್ಯರು; ಪ್ರಕಾಶಕರು: ಶ್ರೀ ಧೀರೇಂದ್ರ ವಾಸುದೇವಾಚಾರ್ಯ ಕೆರೂರ ಅವರು; ಕಿರೀಟಾಕಾರದ ಅಷ್ಟಪತ್ರ; ಪುಟ: ೩೦೦ ಬೆಲೆ: ರೂ. ೩-೨-೦

**ಕನ್ನಡ ಟೈಪ್ ರೈಟರ್ ಲೈನೊಟೈಪ್ ಮತ್ತು ಮಾನೋಟೈಪ್ ಕೈಮಣೆಗಳ ರಚನೆ:**— ಲೇಖಕರು: ಶ್ರೀ ಕೆ. ವಿಜಯ ಪಾಲಯ್ಯನವರು; ಡೆಮ್ಮಿ ಎಂಟರ ಆಕಾರ; ಪುಟ: ೩೧.

***ಮಗಳ ಮದುವೆ:**— (ಕಾದಂಬರಿ) ಬರೆದವರು: 'ಆನಂದ ಕಂದ' ಅವರು; ಪ್ರಕಾಶಕರು: ಶರತ್ ಪ್ರಕಾಶನ ಮಂದಿರ, ಧಾರವಾಡ; ಕಿರೀಟಾಕಾರದ ಅಷ್ಟಪತ್ರ; ಪುಟ: ೩೪೧ ಬೆಲೆ: ರೂ. ೪-೦-೦

***ಮಂತ್ರಾಲಯ ಯಾತ್ರೆ:**— ಬರೆದವರು: ಶ್ರೀ ರಾಜಾ ಶ್ರೀ ಗುರುರಾಜಾಚಾರ್ಯ ಅವರು; ಪ್ರಕಾಶಕರು: ಶ್ರೀ ಪರಿಮಳ ಪ್ರಕಾಶನ ಮಂದಿರ ಮೈಸೂರು; ಕಿರೀಟಾಕಾರದ ಅಷ್ಟಪತ್ರ; ಪುಟ: ೫೮ ಬೆಲೆ: ರೂ. ೦-೮-೦

***ಅಶೋಕ:**— ಬರೆದವರು: ಶ್ರೀ ನಾ. ಕಸ್ತೂರಿ ಅವರು; ಪ್ರಕಾಶಕರು: ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು; ಕಿರೀಟಾಕಾರದ ಅಷ್ಟಪತ್ರ; ಪುಟ: ೧೯೦ ಬೆಲೆ: ರೂ. ೧-೨-೦

**ಮೋಳಿಗೆಯ್ಯನ ಪುರಾಣ:**— ಸಂಶೋಧನಕಾರರು: ಶ್ರೀ ಸಂ. ಶಿ. ಭೂಸನೂರಮಠ ಅವರು; ಪ್ರಕಾಶಕರು: ಶ್ರೀ ವೀರಭದ್ರಪ್ಪ ಹಾಲಬಾವಿ ಅವರು; ಕಿರೀಟಾಕಾರದ ಅಷ್ಟಪತ್ರ; ಪುಟ: ೨೧೭ ಬೆಲೆ: ರೂ. ೩-೦-೦

**ಮೋಳಿಗೆಯ ಮಾರಯ್ಯ ಮತ್ತು ರಾಣಿ ಮಹಾದೇವಿಯವರ ವಚನಗಳು:**— ಸಂಶೋಧಕರು: ಶ್ರೀ ಚೆನ್ನಪ್ಪ ಉತ್ತಂಗಿ ಮತ್ತು ಶ್ರೀ ಸಂ. ಭೂಸನೂರಮಠ ಅವರು; ಕಿರೀಟಾಕಾರದ ಅಷ್ಟಪತ್ರ; ಪುಟ: ೧೫೫ + ೩೨೬ ಬೆಲೆ: ಸಾದಾಪ್ರತಿ: ರೂ. ೫-೦-೦. ಉತ್ತಮಪ್ರತಿ: ರೂ. ೬-೦-೦

* ಈ ಗುರುತು ಹಾಕಿರುವ ಪುಸ್ತಕಗಳ ವಿಮರ್ಶೆ ಕನ್ನಡ ನುಡಿಯಲ್ಲಿ ಮುಂದೆ ಪ್ರಕಟಿಸಲಾಗುವುದು.

'ಕನ್ನಡ ನುಡಿ'ಯಲ್ಲಿ ವಿಮರ್ಶೆಗಾಗಿ ಪುಸ್ತಕಗಳನ್ನು ಕಳಿಸುವವರು ಪುಸ್ತಕದ ಎರಡು ಪ್ರತಿಗಳನ್ನು ಕಳಿಸಬೇಕು. ಒಂದು ಪ್ರತಿ ಕಳಿಸಿದರೆ 'ಕನ್ನಡ ನುಡಿ'ಯಲ್ಲಿಸ್ವೀಕಾರ ಮಾತ್ರ ಪ್ರಕಟಿಸಲಾಗುತ್ತದೆ.



ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨

Reg. No. M. 3975

Licenced to Post without
Prepayment. License No.6



# ಕನ್ನಡ ಸಾಹಿತ್ಯ ಪರಿಷತ್ತು

## ಪರಿಷತ್ತಿನ ಪ್ರಕಟನೆಗಳು

| | | | | |
|---|---|---|---|---|
| ೧. | ಕನ್ನಡ ಬಾವುಟ (ಮೂರನೆಯ ಮುದ್ರಣ) .... | ೨ | ೦ | ೦ |
| ೨. | ಪಂಪ ಭಾರತದ ಕಥೆ (ವಚನ) .... | ೧ | ೪ | ೦ |
| ೩. | ಪಂಪ ಭಾರತದ ನಿಘಂಟು .... .... | ೧ | ೦ | ೦ |
| ೪. | ಪಂಪ ರಾಮಾಯಣದ ಕಥೆ (ವಚನ) .... | ೦ | ೧೨ | ೦ |
| ೫. | *ಪಂಪ ರಾಮಾಯಣ (೪ನೆಯ ಆಶ್ವಾಸ) .... | ೦ | ೮ | ೦ |
| ೬. | ಪಂಪ ರಾಮಾಯಣದ ನಿಘಂಟು .... .... | ೦ | ೮ | ೦ |
| ೭. | *ತೊರವೆಯ ರಾಮಾಯಣ (ಬಾಲಕಾಂಡ ಸಂಧಿ ೧೩–೧೬) .... | ೦ | ೩ | ೯ |
| ೮. | ಸೀತಾಪರಿತ್ಯಾಗ (ಜೈಮಿನಿ ಭಾರತದಿಂದ) .... | ೦ | ೧೨ | ೬ |
| ೯. | ಜೇಮ್ಸ್ ಏಬ್ರಾಮ್ ಗಾರ್ಫೀಲ್ಡನ ಚರಿತ್ರೆ : ಕ್ಯಾಲಿಕೊ ಪ್ರತಿ | ೧ | ೮ | ೦ |
| | ಸಾದಾ ಪ್ರತಿ | ೧ | ೦ | ೦ |
| ೧೦. | ಜ್ಯೋತಿರ್ವಿನೋದಿನಿ .... | ೨ | ೦ | ೦ |
| ೧೧. | ಹರಿದಾಸರ ಕೃತಿಗಳು (ಸ್ವರಪ್ರಸ್ತಾರ ಸಹಿತ) .... | ೦ | ೧೫ | ೦ |
| ೧೨. | ಹೂಮಾಲೆ .... .... | ೦ | ೧೦ | ೦ |
| ೧೩. | ಕನ್ನಡ ನಾಡಿನ ಚರಿತ್ರೆ: ಭಾಗ ೧ (೨ನೆಯ ಮುದ್ರಣ) .... | ೧ | ೮ | ೦ |
| | ಭಾಗ ೨ .... .... | ೧ | ೧೪ | ೦ |
| | ಭಾಗ ೩ .... .... | ೧ | ೦ | ೦ |
| ೧೪. | ವಡ್ಡಾರಾಧನೆ .... .... .... | ೨ | ೮ | ೦ |
| ೧೫. | ಜೈಮಿನಿ ಭಾರತದ ಕನ್ನಡ ಗದ್ಯಾನುವಾದ (ಅಶ್ವಮೇಧಿಕ ಪರ್ವ) | ೨ | ೪ | ೦ |
| ೧೬. | ಹರಿಶ್ಚಂದ್ರನ ರಾಜ್ಯಸಮರ್ಪಣ .... .... | ೦ | ೪ | ೦ |
| ೧೭. | ಸರ್ವೋದಯ .... .... .... | ೦ | ೫ | ೦ |
| ೧೮. | ಸೋಮೇಶ್ವರ ಶತಕ .... .... .... | ೧ | ೪ | ೦ |
| ೧೯. | ಸಂಕಲನ .... .... .... | ೦ | ೧೦ | ೦ |
| ೨೦. | ಕುಮಾರವ್ಯಾಸದರ್ಶನ .... .... | ೦ | ೨ | ೦ |
| ೨೧. | ಕನ್ನಡದಲ್ಲಿ ಸುಧಾರಣೆಗಳು .... .... | ೦ | ೬ | ೦ |
| ೨೨. | ಅರುಂಧತಿ .... .... .... | ೦ | ೪ | ೦ |
| ೨೩. | ಚಂದ್ರಹಾಸೋಪಾಖ್ಯಾನ .... .... | ೦ | ೧೨ | ೦ |
| ೨೪ | ದೂತವಾಕ್ಯ .... .... .... | ೦ | ೪ | ೦ |
| ೨೫ | ಶಿವಶರಣರ ಕೃತಿಗಳು .... .... .... | ೨ | ೦ | ೦ |
| ೨೬. | ಹರಿದಾಸ ಸಾಹಿತ್ಯ– ಇಂಗ್ಲಿಷ್ ಉಪೋದ್ಘಾತದೊಡನೆ .... | ೧೦ | ೦ | ೦ |
| ,, | ಇಂಗ್ಲಿಷ್ ಉಪೋದ್ಘಾತವಿಲ್ಲದ ಪ್ರತಿ.... | ೮ | ೦ | ೦ |

* ಪ್ರತಿಗಳು ಮುಗಿದಿವೆ.

ಪುಸ್ತಕಗಳನ್ನು ಕೊಳ್ಳುವವರಿಗೆ ಕೆಳಗೆ ಕಂಡಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು.

ರೂ. ೧೫/ ಮತ್ತು ಮೇಲ್ಪಟ್ಟು ಬೆಲೆಯ ಪುಸ್ತಕಗಳನ್ನು ಕೊಳ್ಳುವವರಿಗೆ ಸೇ. ೧೦ ರಂತೆ,
ರೂ. ೫೦/ ಮತ್ತು ಮೇಲ್ಪಟ್ಟು ಕೊಳ್ಳುವವರಿಗೆ ಸೇ. ೧೫ ರಂತೆ,
ರೂ. ೧೦೦/ ಮತ್ತು ಮೇಲ್ಪಟ್ಟು ಕೊಳ್ಳುವವರಿಗೆ ಸೇ. ೨೦ ರಂತೆ.

ಶ್ರೀಕಂಠಯ್ಯ ಅಚ್ಚುಕೂಟ–ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೨. ೧,೩೦೦